


ಸಂಚಿಕೆ 5 । ಸಂಪುಟ 2 । ಜುಲೈ 2022

# ಕುತೂಹಲಿ

ವಿ P V ಪ್ರ

ವಿಶೇಷ ಸಂಚಿಕೆ

ವೈಜ್ಞಾನಿಕ ಕಥೆ ಹಾಗೆಂದರೇನು?

ಅಮೃತ ಸರೋವರ!

ನಂಬರ್ ಗೇಮ್

ಕಲ್–ಸಂಜೀವಮ್ಮನ ವೃತ್ತಾಂತ



**Editor-in-Chief**
Nakul Parashar

**Advisors**
Prof. S. Ayyappan
Dr. T. V. Venkateswaran

**Editor**
Kollegala Sharma (A.S.K.V.S.Sharma)

**Production**
Amruteswari, B.

**Cover Design & Layout**
Kumar S

**Address for Correspondence**
Kutuhali, C/o Karnataka Science & Technology Academy,
Prof UR Rao Science Centre,
Major Sandip Unnikrishnan Road
Horticultural Sciences College Campus
Near Doddabettahalli Extension Bus Stop
Vidyaranyapura PO, Yalahanka
Bengaluru-560097, Karnataka
Or
Kutuhali, KSTA Office, V-LEAD
CA2, KIADB industrial housing area, Hebbal, Ring Rd, Mysuru – 570018, Karnataka

**Telephone**
91-9886640328 | 91-080-2972550

**Email**
kutuhalikannada@gmail.com
ksta.gok@gmail.com

**Website**
www.kstacademy.in/kn/kutuhali







ಭಾಗ -3



## ಪುಟ ಬಂಗಾರ



04 ವೈಜ್ಞಾನಿಕ ಕಥೆ ಹಾಗೆಂದರೇನು?
ಕೊಳ್ಳೇಗಾಲ ಶರ್ಮ



13 ಪತ್ತೇದಾರರಾದ ವೈದ್ಯರು
ಡಾ. ವಿನೀತ್ ವಸಿಷ್ಠ

08 ಅಮೃತ ಸರೋವರ!
ಪ್ರೊ. ಕೆ. ಎನ್. ಗಣೇಶಯ್ಯ

16 ನಂಬರ್ ಗೇಮ್
ಸಪ್ನಾ ಕಟ್ಟಿ



20 ವಿಧಿಲಿಖಿತ
ಡಾ. ಸಿ. ಪಿ. ರವಿಕುಮಾರ್



25 ಅಂಕಂಗುಡು
ನಾರಾಯಣ ಬಾಬಾನಗರ



27 ಕಲ್-ಸಂಜೀವಮ್ಮನ ವೃತ್ತಾಂತ
ಡಾ. ಶಾಂತಲಾ ಅನಿಲ್



30 ಹೀಗೊಂದು ವಿಷ(ಷಾ)ದ ಕತೆ
ಡಾ. ಕಿರಣ್ ವಿ.ಎಸ್.

ಆಕಾಶ ನಕ್ಷೆ | 12

ವಿಕ್ರಮ ಮತ್ತು ಬೇತಾಳನ ಕತೆಗಳು | 32

# ವಿಜ್ಞಾನದ ಸಾಮಾಜಿಕ ಜವಾಬುದಾರಿ ಹೇಗೆ ಪೂರೈಸೋಣ?



## ನಿರ್ದೇಶಕರ ಮನದಿಂದ

● ನಕುಲ್ ಪರಾಶರ

**ಭಾಷೆಗಳ ಬೇಲಿಯು ಅಡ್ಡಿಯಾಗದಂತೆ ಎಲ್ಲ ಮಾಹಿತಿಯನ್ನೂ ಭಾರತೀಯ ಭಾಷೆಗಳಲ್ಲಿಯೂ ಸಿದ್ಧಪಡಿಸಬೇಕಾಗಿದೆ. ವಿಜ್ಞಾನ ಮತ್ತು ತಂತ್ರಜ್ಞಾನದ ಸಂವಹನ, ಜನಪ್ರಿಯ ವಿಜ್ಞಾನ ಹಾಗೂ ವಿಜ್ಞಾನ ವಿಸ್ತರಣೆಗೆ ಹಲವು ಸವಾಲುಗಳು ಎದುರಾಗುತ್ತವೆ**

ತಂತ್ರಜ್ಞಾನ ನಾಗಾಲೋಟದಲ್ಲಿ ಸಾಗುತ್ತಿದೆ ಎಂದರೆ ತಪ್ಪೇನಲ್ಲ. ಕೈಗಾರಿಕಾ ಕ್ರಾಂತಿ 3.0 ಎನ್ನುವುದು 4.0 ಎಂದಾಗಲು ಸಾಕಷ್ಟು ಸಮಯ ಬೇಕಾಗಿತ್ತು. ಆದರೆ ಇದೇ 4.0 ಮತ್ತು 5.0 ಕೈಗಾರಿಕಾ ಕ್ರಾಂತಿಗಳ ನಡುವಣ ಕಾಲದ ಸೀಮೆ ಸುಸ್ಪಷ್ಟವಾಗಿಲ್ಲ. ಈ ಕ್ಷೇತ್ರದ ಪಂಡಿತರ ಪ್ರಕಾರ 2011ರಲ್ಲಿ ಸ್ವಚಾಲಿತ ಯಾಂತ್ರೀಕರಣ ಹೆಚ್ಚಾದಾಗ ಕೈಗಾರಿಕಾ ಕ್ರಾಂತಿ 4.0 ಎಂಬುದು ಆರಂಭವಾಯಿತು. ಸ್ವಯಂಚಾಲನೆಯಲ್ಲಿಯೇ ಇನ್ನಷ್ಟು ಸುಧಾರಣೆಯಾಗಿದೆ. ಕೈಗಾರಿಕಾ ಕ್ರಾಂತಿ 5.0 ಎಂಬುದು ಆರಂಭವಾದದ್ದನ್ನು ಗುರುತಿಸುವುದು ಕಷ್ಟವಾಗಿದೆ. ಇಂಟೆಲಿಜೆಂಟ್ ಯಂತ್ರಗಳು ಕಾಲಿಟ್ಟ ಮೇಲೆ ಸಮಯಕ್ಕೆ ತಕ್ಕಂತೆ ತತ್ ಕ್ಷಣದಲ್ಲಿ ಮಾಹಿತಿ ಒದಗುವುದರಿಂದ ತಯಾರಿಕೆಯ ಗುಣಮಟ್ಟ ಹಾಗೂ ಪ್ರಮಾಣವೆರಡೂ ಮೇಲೋಟದಲ್ಲಿವೆ. ಸುಧಾರಿತ ಆರ್ಟಿಫಿಶಿಯಲ್ ಇಂಟೆಲಿಜೆನ್ಸ್ ತಂತ್ರಜ್ಞಾನವನ್ನು ಬಳಸುವ ಯಾವುದೇ ಕೈಗಾರಿಕೆಯನ್ನು ತೆಗೆದುಕೊಂಡರೂ, ಲಾಭದಾಯಕವಾಗಲು ಬೇಕಾದ ಅವಧಿಯ ಸಮಯ ಕುಗ್ಗುತ್ತಲಿದೆ. ಕೋವಿಡ್ ದಾಳಿಯನ್ನು ಜಗತ್ತು ಎದುರಿಸುತ್ತಿದ್ದ ಇತ್ತೀಚಿನ ಸಂದರ್ಭದಲ್ಲಿ ಜೀವ–ವೈದ್ಯಕೀಯ ಸಂಶೋಧನಾ ಕ್ಷೇತ್ರವು ಲಸಿಕೆಯನ್ನು ಸಿದ್ಧಪಡಿಸಿದ್ದು ಇದಕ್ಕೆ ಉದಾಹರಣೆ. ಹಿಂದಿಯ ಯಾವುದೇ ಲಸಿಕೆಗಳ ಅಭಿವೃದ್ಧಿಗೆ ಹೋಲಿಸಿದರೂ ಈ ಬಾರಿ ಲಸಿಕೆಯ ಅಭಿವೃದ್ಧಿ ಕ್ಷಿಪ್ರವೂ, ಸಕ್ಷಮವೂ ಆಗಿತ್ತು. ಪ್ರಮಾಣವೂ ಅಷ್ಟೆ. ಬೃಹತ್ ಸಾಂಕ್ರಾಮಿಕ ರೋಗವನ್ನು ಎದುರಿಸಲು ಶಕ್ತವಾದಷ್ಟು ತಯಾರಾಗಿತ್ತು.

ಆದರೆ ನೋಡಿ. ಕೋವಿಡ್–19 ಹಾವಳಿ ಇನ್ನೇನು ಕ್ಷೀಣಿಸಿತು ಎನ್ನುವಷ್ಟರಲ್ಲಿಯೇ ಇನ್ಯಾವುದೋ ವಿಕೃತ ರೂಪದ ಜನನ ಪ್ರಪಂಚದ ಇನ್ಯಾವುದೋ ಮೂಲೆಯಲ್ಲಿ ಆಗುತ್ತದೆ. ಕೋವಿಡ್ ಮಾಡಿದ ಗಾಯ ಮಾಯುವ ಮುನ್ನವೇ ಇನ್ನೊಂದಿಷ್ಟು ಚಡಪಡಿಕೆಯನ್ನುಂಟು ಮಾಡುತ್ತದೆ. ಖಾಯಿಲೆ ಸಾಂಕ್ರಾಮಿಕವೋ, ಕೇವಲ ಸ್ಥಾನಿಕವೋ, ರೋಗ ನಿಯಂತ್ರಣ ನಿಯಮಗಳನ್ನು ಪಾಲಿಸಬೇಕೆನ್ನುವುದನ್ನು ಜನ ಸಾಮಾನ್ಯರು ಕಲಿತಿದ್ದಾರೆ. ಏನಿಲ್ಲದಿದ್ದರೂ, ವಿಜ್ಞಾನಿಗಳೂ, ಜನಸಾಮಾನ್ಯರೂ ವಿಜ್ಞಾನ ಮತ್ತು ತಂತ್ರಜ್ಞಾನ ಸಂವಹನ ಎಷ್ಟು ಮುಖ್ಯ ಎನ್ನುವುದನ್ನೂ ಅರಿಯುವಂತಾಯಿತು.

ಈ ನಿಟ್ಟಿನಲ್ಲಿ ನೋಡಿದರೆ, ವಿಜ್ಞಾನ–ತಂತ್ರಜ್ಞಾನ–ಇನೊವೇಶನ್ ಕುರಿತ ಅಥವಾ ಶಿಕ್ಷಣ ಕುರಿತ ಹೊಸ ನೀತಿಗಳು ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಜನತೆಗೆ ಇನ್ನಷ್ಟು ಹತ್ತಿರ ಕೊಂಡೊಯ್ಯಬೇಕೆಂಬುದನ್ನು ಒತ್ತಿ ಹೇಳಿವೆ. ಕಾರ್ಪೊರೇಟ್ ಸೋಶಿಯಲ್ ರೆಸ್ಪಾಂಸಿಬಿಲಿಟಿ ಅಥವಾ ಕಾರ್ಪೊರೇಟ್ ಸಾಮಾಜಿಕ ಜವಾಬುದಾರಿಯಂತೆಯೇ ವಿಜ್ಞಾನದ ಸಾಮಾಜಿಕ ಹೊಣೆಗಾರಿಕೆ (ಸೈಂಟಿಫಿಕ್ ಸೋಶಿಯಲ್ ರೆಸ್ಪಾಂಸಿಬಿಲಿಟಿ – ಎಸ್‌ಎಸ್ ಆರ್) ಎನ್ನುವ ಪರಿಕಲ್ಪನೆಯನ್ನು ಭಾರತ ಸರಕಾರ ಈ ವರ್ಷದ ಮೇ ತಿಂಗಳಲ್ಲಿ ಪ್ರಕಟಿಸಿತು. ಜಟಿಲವಾದ ಆದರೆ ಸಾರ್ವಜನಿಕರಿಗೆ ಉಪಯುಕ್ತವೆನ್ನಿಸುವಂತಹ ವೈಜ್ಞಾನಿಕ ಮಾಹಿತಿಯನ್ನು ಜನತೆಗೆ ಮುಟ್ಟಿಸುವುದು ಈ ಹೊಣೆಗಾರಿಕೆಯಲ್ಲಿ ಒಳಗೊಂಡಿರುವ ಅಂಶ. ಇಂತಹ ಎಲ್ಲ ಪರಿಕಲ್ಪನೆಗಳ ಅನುಷ್ಠಾನಕ್ಕೆ ಇರುವಂತೆಯೇ ಎಸ್ ಎಸ್ ಆರ್ ಅನುಷ್ಠಾನದಲ್ಲಿಯೂ ಸವಾಲುಗಳಿವೆ.

**15ನೇ ಪುಟ ನೋಡಿ ➤**

# ವೈಜ್ಞಾನಿಕ ಕಥೆ ಹಾಗೆಂದರೇನು?

**ವಿಜ್ಞಾನ ಮತ್ತು ಕಲ್ಪನೆಗಳು ಮೇಳೈಸಿದ ಭಾವುಕ ಜಗತ್ತನ್ನು ತೆರೆದಿಡುವ ಸಾಹಿತ್ಯವೇ ವೈಜ್ಞಾನಿಕ ಕಥೆ ಎನ್ನುತ್ತಾರೆ ಕೊಳ್ಳೇಗಾಲ ಶರ್ಮ**

SCIENCE FICTION



ಕಥೆ ಎಂದರೇನು ಎಂಬುದು ಗೊತ್ತಷ್ಟೆ. ಇನ್ನು ವೈಜ್ಞಾನಿಕ ಕಥೆ ಎಂದರೇನು ಎನ್ನುವ ಪ್ರಶ್ನೆ ಬರಬಹುದು. ವೈಜ್ಞಾನಿಕ ಎಂದರೆ ಬರೆವಣಿಗೆ ಪ್ರಕ್ರಿಯೆಯಲ್ಲಿ ವಿಜ್ಞಾನ ಇದೆ ಅಂತಲ್ಲ. ಕಥೆಯ ಹೂರಣ ವಿಜ್ಞಾನ ಅಷ್ಟೆ. ಬೆರಗು, ವಿಸ್ಮಯ ಹಾಗೂ ಅದ್ಭುತವೆನ್ನಿಸುವ ಭಾವಗಳನ್ನು ಮೂಡಿಸುವ ಕಥೆಗಳನ್ನು ವೈಜ್ಞಾನಿಕ ಕಥೆಗಳು ಎಂದು ಪರಿಗಣಿಸುತ್ತಾರೆ. ಮಕ್ಕಳನ್ನು ಬೆರಗುಗೊಳಿಸುವ ಫ್ಯಾಂಟಸಿ ಅರ್ಥಾತ್ ಅದ್ಭುತ ಕಥೆಗಳನ್ನೂ ವೈಜ್ಞಾನಿಕ ಕಥೆಗಳು ಎಂದು ಕೆಲವರು ಹೇಳುವುದುಂಟು. ಇನ್ನು ಕೆಲವರು ಇವು ಕೇವಲ ಫ್ಯಾಂಟಸಿಗಳಷ್ಟೆ. ವೈಜ್ಞಾನಿಕವಲ್ಲ ಎಂದೂ ಅವುಗಳನ್ನು ವಾದಿಸುತ್ತಾರೆ.

ಗ್ರೀಕರ ಪುರಾಣಗಳಿರಬಹುದು, ಅರೇಬಿಯನ್ ನೈಟ್ಸ್, ಸಿಂದಬಾದನ ಯಾನಗಳು ಮೊದಲಾದ ಕಥೆಗಳಿರಬಹುದು ಅಥವಾ ರಾಮಾಯಣ, ಮಹಾಭಾರತವನ್ನೂ ಅದ್ಭುತಗಳೆನ್ನುತ್ತಾರೆ. ಇವುಗಳಲ್ಲಿ ಮಾಯ, ಮಂತ್ರ ಹಾಗೂ ಬೆರಗುಗೊಳಿಸುವ ಕಲ್ಪನೆಗಳಿಗೆ ಪ್ರಮುಖ ಸ್ಥಾನವಿದೆ. ಗ್ರೀಕರ ದೊರೆ ಹರ್ಕ್ಯುಲಸನ ಜೀವ ಅವನ ಕೂದಲಿನಲ್ಲಿ ಇದೆ ಎನ್ನುವುದು ಬೆರಗುಗೊಳಿಸುತ್ತದೆ. ಮಹಾಭಾರತ ಹಾಗೂ ರಾಮಾಯಣದ ಪ್ರತಿಯೊಂದು ಕಥೆಯೂ ಇಂತಹ ಅದ್ಭುತವೇ. ಇತ್ತೀಚಿನ ಅದ್ಭುತ ಕಥಾನಕಗಳಲ್ಲಿ ಬಹಳ ಪ್ರಸಿದ್ಧಿ ಪಡೆದ ಹೆಸರು ಹ್ಯಾರಿ ಪಾಟರನ ಸಾಹಸಗಳು. ಮಾಯೆ ಹಾಗೂ ಜಾದೂಗಳ ಲೋಕವನ್ನು ಇವು ಸೃಷ್ಟಿಸುತ್ತವೆ. ಹದಿಹರೆಯದವರಲ್ಲಿ ಬಲು ಜನಪ್ರಿಯವಾದ ಹಲವಾರು ಜಪಾನೀ ಕಥೆಗಳೂ ಕೂಡ ಅದ್ಭುತಗಳೇ.

ವೈಜ್ಞಾನಿಕ ಎನ್ನುವ ಕಥೆಗಳ ಕಾಲ ಯಾವುದು ಎಂದು ಹೇಳುವುದು ಕಷ್ಟ. ಏಕೆಂದರೆ ರಾಮಾಯಣ, ಮಹಾಭಾರತದ ಹಲವು ಘಟನೆಗಳು ಅಮೋಘ ವೈಜ್ಞಾನಿಕ ಕಲ್ಪನೆಗಳೆನ್ನಿಸುತ್ತವೆ. ಉದಾಹರಣೆಗೆ, ಜಟಾಯುವಿನ ಕಥೆಯಲ್ಲಿ ಆ ಹಕ್ಕಿ ಮಾತನಾಡುತ್ತದೆ. ಮಾತು ಬಾರದ ಪಕ್ಷಿಯೊಂದು ಮಾತನಾಡುವುದೇ ಅದ್ಭುತ. ಹಾಗೆಯೇ ಮುಳುಗದ ಕಲ್ಲುಗಳಿಂದ ಸೇತುವೆ ಕಟ್ಟುವ ಸಂಗತಿ. ಅಸಾಧ್ಯ ಎನ್ನಿಸುವ ವಿಷಯಗಳನ್ನೂ ಇರಬಹುದೇನೋ ಎನ್ನಿಸುವಂತೆ ಮಾಡುತ್ತವೆ. ವೈಜ್ಞಾನಿಕ ಕಥೆಗಳ ಒಂದು ಗುಣ ಇದು. ಹಾಗಿದ್ದೂ ಇಂದಿನ ಸಾಹಿತ್ಯದಲ್ಲಿ ವೈಜ್ಞಾನಿಕ ಕಥೆ ಎನ್ನಿಸಿಕೊಳ್ಳುವವುಗಳು ಆರಂಭವಾಗಿ ಬಹಳ ಕಾಲವೇನಾಗಿಲ್ಲ. ಸುಮಾರು ಇನ್ನೂರು ವರ್ಷಗಳಾಗಿವೆಯಷ್ಟೆ. ಇವುಗಳಲ್ಲಿ ಅದ್ಭುತ, ಅಸಂಗತ ಹಾಗೂ ಅಚ್ಚರಿಯ ಅಂಶಗಳ ಜೊತೆಗೇ ವಿಜ್ಞಾನದ ಅಂಶಗಳನ್ನು ಕಾಣಬಹುದು. ಮೇರಿ ಶೆಲ್ಲಿ ಎನ್ನುವ ಇಂಗ್ಲೀಷ್ ಮಹಿಳೆ ಮೊತ್ತ ಮೊದಲ ವೈಜ್ಞಾನಿಕ ಕಥೆಯನ್ನು ಬರೆದವಳೆಂದು ಖ್ಯಾತಿ ಪಡೆದವಳು. ಈಕೆ ಸಂಜೆ ಚಹಾ ಕೂಟಗಳಲ್ಲಿ ಕಾಲ ಕಳೆಯಲೆಂದು ಹೇಳಿದ ಕಾಲ್ಪನಿಕ ಕಥೆ "ದಿ ಫ್ರಾಂಕನ್ಸ್ಟೈನ್" ಬಹಳಷ್ಟು ಜನಪ್ರಿಯವಾದ ಕಥೆ. ಆಗ ವೈದ್ಯಕೀಯವಿನ್ನೂ ಬೆಳೆಯುತ್ತಿದ್ದ ಕಾಲ. ಅಂಗಗಳನ್ನು ಕಸಿ ಮಾಡಬಹುದೇ ಎನ್ನುವುದರ ಬಗ್ಗೆ ಚರ್ಚೆ ನಡೆಯುತ್ತಿತ್ತು. ಒಂದು ಜೀವಿಯ ಅಂಗವನ್ನು ಮನುಷ್ಯರಿಗೆ ಜೋಡಿಸಬಹುದು ಎನ್ನುವ ಕಲ್ಪನೆಗೆ ಗರಿ ಮೂಡಿತ್ತು. ಇಂತಹ ಸಂದರ್ಭದಲ್ಲಿ ಹಾಗೊಂದು ಪ್ರಯೋಗವನ್ನು ಗುಟ್ಟಾಗಿ ಮಾಡಿದ ವಿಜ್ಞಾನಿಯೊಬ್ಬನ ಕಥೆಯನ್ನು ಮೇರಿ ಶೆಲ್ಲಿ ಹೇಳಿದ್ದಳು. ವೈವಿಸೆಕ್ಷನ್ ಎಂದು ಪ್ರಸಿದ್ಧಿಯಾದ ಕಸಿ

ತಂತ್ರದಿಂದ ಅನಾಹುತಗಳಾಗುವುದೆಂದು ವಾದಿಸುವ ಈ ಕಥೆಯಲ್ಲಿ ಒಬ್ಬ ವೈದ್ಯ ಕೃತಕವಾಗಿ ಸೃಷ್ಟಿಸಿದ ಜೀವಿ ಭಯಾನಕ ರಾಕ್ಷಸನಾಗುತ್ತದೆ. ತನ್ನ ಸೃಷ್ಟಿಕರ್ತನನ್ನೇ ಬಲಿ ತೆಗೆದುಕೊಳ್ಳುತ್ತದೆ.

ವೈಜ್ಞಾನಿಕ ಕಥೆಗಳು ಹೀಗೆ ಇಂದಿಗೂ ಹೊಸ ಶೋಧಗಳು ಹಾಗೂ ತಂತ್ರಜ್ಞಾನಗಳನ್ನು ವಿಮರ್ಶೆ ಮಾಡುವ ಸಾಧನಗಳಾಗಿಯೇ ಬೆಳೆದಿವೆ. ಅಸಾಧ್ಯವೆನ್ನಿಸುವ ತಂತ್ರಜ್ಞಾನಗಳು, ಅಸಂಭವವೆನ್ನಿಸುವ ಘಟನೆಗಳು ವೈಜ್ಞಾನಿಕ ಕಥೆಗಳನ್ನು ಇನ್ನಷ್ಟು ರೋಚಕವೆನ್ನಿಸುತ್ತವೆ. ಐಸಾಕ್ ಅಸಿಮೋವನ ಕಥೆಯೊಂದರಲ್ಲಿ ಬರುವ ಜಗತ್ತಿಗೆ ಎರಡು ಸೂರ್ಯ. ಅಲ್ಲಿ ಸಂಜೆ ಎನ್ನುವುದು ಅಪರೂಪ. ಅಂತಹ ಲೋಕದಲ್ಲಿ ಇದ್ದಕ್ಕಿದ್ದ ಹಾಗೆ ಕತ್ತಲೆಯಾದರೆ ಏನಾಗಬಹುದು? ಎಂತಹ ಅದ್ಭುತ ಕಲ್ಪನೆಯಲ್ಲವೇ?

ಹೌದು. ಇಂತಹ ಅಸಂಭವಗಳನ್ನು, ಅಸಂಗತಗಳನ್ನು ಬಳಸಿಕೊಳ್ಳುವ



ಐಸಾಕ್ ಅಸಿಮೋವ್ ಅವರ ಕಥಾ ಸಂಗ್ರಹಗಳು

ವೈಜ್ಞಾನಿಕ ಕಥೆಗಳು ತನ್ಮೂಲಕ ಹಲವು ವೈಜ್ಞಾನಿಕ ತತ್ವಗಳನ್ನು ತಿಳಿಸಲು ಪ್ರಯತ್ನಿಸುತ್ತವೆ. ಎರಡು ಸೂರ್ಯನ ಜಗತ್ತಿನ ಬಗ್ಗೆ ಮಾತನಾಡುತ್ತಲೇ ಭೂಮಿ ಮತ್ತು ಸೂರ್ಯನ ನಡುವಣ ಸಂಬಂಧಗಳನ್ನು ಕಥೆ ಬಿಡಿಸಿ ಹೇಳುತ್ತದೆ. ಈ ನಿಟ್ಟಿನಲ್ಲಿ ವೈಜ್ಞಾನಿಕ ಕಥೆಗಳು ವೈಜ್ಞಾನಿಕ ತತ್ವಗಳ ಬಗ್ಗೆ ಅಚ್ಚರಿಯನ್ನುಂಟು ಮಾಡುವ ಸಂವಹನ ತಂತ್ರಗಳು ಎನ್ನಬಹುದು.

ಪುರಾಣಗಳನ್ನೂ ವೈಜ್ಞಾನಿಕ ಕಥೆಗಳ ಯಾದಿಗೆ ಸೇರಿಸುವುದಾದರೆ, ಅಪ್ಪಟ ವೈಜ್ಞಾನಿಕ ಕಥೆ ಎನ್ನುವುದು ಇಲ್ಲವೇ ಎಂದು ಪ್ರಶ್ನಿಸಬಹುದು. ಅಸಂಗತ, ಅದ್ಭುತ, ಅಚ್ಚರಿಯ ಅಂಶಗಳ ಜೊತೆಗೆ ವೈಜ್ಞಾನಿಕ ಕಥೆ ಎನ್ನಿಸಿಕೊಳ್ಳುವ ಕಥೆಯ ಹಂದರದಲ್ಲಿ ಕೆಲವು ವಿಶಿಷ್ಟ ಗುಣಗಳಿರಬೇಕು ಎನ್ನುವವರಿದ್ದಾರೆ. ಅವು ಕಾಲ ಹಾಗೂ ಸೀಮೆಯನ್ನು ಮೀರಿದವುಗಳಾಗಿರಬೇಕು. ಅರ್ಥಾತ್, ಅವು ಬೇರೆ ಯಾವುದೋ ಜಗತ್ತಿನ ಘಟನೆಗಳಾಗಿರಬೇಕು. ಇಲ್ಲವೇ ಬೇರೆ ಯಾವುದಾದರೂ ಕಾಲದ ಘಟನೆಗಳಾಗಿರಬೇಕು ಎನ್ನುವುದು ಇತ್ತೀಚಿನ ವಿಮರ್ಶಕರ ಅಂಬೋಣ.

ಪುರಾಣಗಳನ್ನೂ ಸೇರಿದಂತೆ ಇಂದಿನ ವೈಜ್ಞಾನಿಕ ಕಥೆಗಳೆಲ್ಲದರಲ್ಲೂ ಈ ಒಂದು ತಂತ್ರವನ್ನು ಕಥೆಗಾರರು ಬಳಸುವುದನ್ನು ಕಾಣಬಹುದು. ರಾಮಾಯಣದಲ್ಲಿ ರಾಮ ಅಯೋಧ್ಯೆಯಲ್ಲಿ ತೇಲು ಸೇತುವೆ ಕಟ್ಟುವುದಿಲ್ಲ. ಹನುಮಂತನಿಗೆ ಸಂಜೀವನಿ ಸಿಗುವುದು ಬೇರಾವುದೋ ದೇಶದಲ್ಲಿ. ವಾಸುಕಿ ಎನ್ನುವ ಏಳು ತಲೆಯ ಹಾವು ಇರುವುದು ಪಾತಾಳ ಲೋಕದಲ್ಲಿ. ಇವೆಲ್ಲವುಗಳ ಗುಣಗಳೂ ಅಮಾನುಷ. ಮಾನವನ ಕಲ್ಪನೆಯನ್ನೂ ಮೀರಿದ್ದು. ಹಾಗೆಯೇ ಹ್ಯಾರಿ ಪಾಟರಿನಲ್ಲಿಯೂ ಆ ಎಲ್ಲ ಜಾದೂಗಳೂ ನಡೆಯುವುದು ಇನ್ಯಾವುದೋ ಮಾಂತ್ರಿಕರ ಲೋಕದಲ್ಲಿ. ಮಾನವರ ಲೋಕದಲ್ಲಿ ಅಲ್ಲ.

ಹೀಗೆ ಯಾವುದೋ ಕಾಲ, ಹಾಗೂ ಯಾವುದೋ ದೇಶದಲ್ಲಿ ನಮಗೆ ಇಚ್ಛೆ ಬಂದಂತೆ ಕಲ್ಪನೆಗಳನ್ನು ಹರಿಬಿಡಬಹುದು. ಈ ಕಲ್ಪನೆಗಳ ಜೊತೆಗೆ ಒಂದಿಷ್ಟು ವಿಜ್ಞಾನವನ್ನೂ ಬೆರೆಸಿದರೆ ವೈಜ್ಞಾನಿಕ ಕಥೆ ಎನಿಸುತ್ತದೆ.



ರೋಬಾಟುಗಳು ವೈಜ್ಞಾನಿಕ ಕಥಾಪ್ರಪಂಚದ ಅತ್ಯಂತ ಪರಿಚಿತ ಪಾತ್ರಗಳು

**ವೈಜ್ಞಾನಿಕ ಕಥೆಗಳು ಹೀಗೆ ಇಂದಿಗೂ ಹೊಸ ಶೋಧಗಳು ಹಾಗೂ ತಂತ್ರಜ್ಞಾನಗಳನ್ನು ವಿಮರ್ಶೆ ಮಾಡುವ ಸಾಧನಗಳಾಗಿಯೇ ಬೆಳೆದಿವೆ. ಅಸಾಧ್ಯವೆನ್ನಿಸುವ ತಂತ್ರಜ್ಞಾನಗಳು, ಅಸಂಭವವೆನ್ನಿಸುವ ಘಟನೆಗಳು ವೈಜ್ಞಾನಿಕ ಕಥೆಗಳನ್ನು ಇನ್ನಷ್ಟು ರೋಚಕವೆನ್ನಿಸುತ್ತವೆ. ಐಸಾಕ್ ಅಸಿಮೋವನ ಕಥೆಯೊಂದರಲ್ಲಿ ಬರುವ ಜಗತ್ತಿಗೆ ಎರಡು ಸೂರ್ಯ. ಅಲ್ಲಿ ಸಂಜೆ ಎನ್ನುವುದು ಅಪರೂಪ. ಅಂತಹ ಲೋಕದಲ್ಲಿ ಇದ್ದಕ್ಕಿದ್ದ ಹಾಗೆ ಕತ್ತಲೆಯಾದರೆ ಏನಾಗಬಹುದು? ಎಂತಹ ಅದ್ಭುತ ಕಲ್ಪನೆಯಲ್ಲವೇ?**

ಜುರಾಸಿಕ್ ಪಾರ್ಕ್ ಇದಕ್ಕೆ ಉದಾಹರಣೆ. ಇಲ್ಲಿಯೂ ತಮ್ಮ ಕಲ್ಪನೆಗಳನ್ನು ಗರಿಗೆದರಲು ಕಥೆಗಾರ ಯಾವುದೋ ಅಪರಿಚಿತ ದ್ವೀಪವನ್ನು ಬಳಸುತ್ತಾನೆ. ಆದರೆ ಡಿಎನ್ಎಯನ್ನು ಹೆಕ್ಕುವ, ತದ್ರೂಪಿಯನ್ನು ಸೃಷ್ಟಿಸುವ ಇಂದಿನ ತಂತ್ರಜ್ಞಾನಗಳನ್ನು ಬಳಸುವ ಕಲ್ಪನೆಯ ಜೊತೆಗೆ ಇದನ್ನು ಕೂಡಿಸಿ ಅದ್ಭುತ ಕಥೆಯನ್ನು ಹೆಣೆಯುತ್ತಾನೆ. ಆ ದ್ವೀಪದಲ್ಲಿ ಕೋಟ್ಯಂತರ ವರ್ಷಗಳ ಹಿಂದೆ ಅಳಿದು ಹೋದ ಜೀವಿಗಳು ಮತ್ತೆ ಜೀವತಳೆದಂತೆ ಕಲ್ಪಿಸುತ್ತಾನೆ.

ವೈಜ್ಞಾನಿಕ ಕಥೆಗಳ ಹೂರಣವೇನಿರಬೇಕು? ಎಂತಹ ವಿಜ್ಞಾನ?







ಕೇವಲ ವೈಜ್ಞಾನಿಕ ಕಥೆಗಳಲ್ಲಿಯಷ್ಟೆ ಇರಬಲ್ಲವು. ಯಂತ್ರಮಾನವರು ಅಥವಾ ರೋಬಾಟುಗಳು ಬಹುತೇಕ ವೈಜ್ಞಾನಿಕ ಕಥೆಗಳಲ್ಲಿ ಬರುವ ಪಾತ್ರಗಳು. ಇಂತಹ ಕಥೆಗಳನ್ನು ವೈಜ್ಞಾನಿಕ ಎಂದು ಗುರುತಿಸುವುದು ಸುಲಭ. ಹಾಗೆಯೇ ರಾಕೆಟ್ಟುಗಳು, ವ್ಯೋಮಯಾನ ನೌಕೆಗಳು ಕೂಡ ಕಥಾ ಹಂದರದಲ್ಲಿ ಕೂಡಿಕೊಂಡಾಗ ಅದು ವೈಜ್ಞಾನಿಕ ಕಥೆ ಎಂಬುದು ಸುಸ್ಪಷ್ಟ. ಇನ್ನು ಅನ್ಯಗ್ರಹಜೀವಿಗಳು ಅಥವಾ ಏಲಿಯನ್ನುಗಳು ವೈಜ್ಞಾನಿಕ ಕಥೆಗಳಲ್ಲಿ ಅನಿವಾರ್ಯವೇನೋ ಎನ್ನಿಸುವಷ್ಟು ಬಳಕೆಯಾಗಿಬಿಟ್ಟಿವೆ. ನಾಲ್ಕನೆಯದು ಅಪರಿಚಿತ ಪ್ರಾಣಿಗಳು, ಜೀವಿಗಳು, ಖನಿಜಗಳು ಅಥವಾ ವಸ್ತುಗಳ ಕುರಿತ ಕಥೆಗಳು. ಕೆಲವೊಮ್ಮೆ ಪರಿಚಿತ ಇರುವೆಯ ಅಪರಿಚಿತ ಆಯಾಮವೂ ಕಥೆಗೆ ಅದ್ಭುತ ಹಂದರವನ್ನು ಒದಗಿಸುತ್ತದೆ. ಬೃಹದಾಕಾರದ ಇರುವೆ, ಜೇಡನಂತೆಯೇ ಬಲೆ ಎಸೆಯುವ ಮನುಷ್ಯ ಇವೆಲ್ಲವೂ ಕಾಲ್ಪನಿಕವೇ. ಸಾಂಪ್ರದಾಯಿಕ ನಂಬಿಕೆಗಳಿಗೆ ಸವಾಲೊಡ್ಡುವ ಕಲ್ಪನೆಗಳು ಹಾಗೂ ಹುಚ್ಚ ವಿಜ್ಞಾನಿಗಳದ್ದು ಇನ್ನೊಂದು ಬಗೆ. ಇಂತಹ ಕಥೆಗಳೂ ವೈಜ್ಞಾನಿಕ ಕಥಾಸಂಗ್ರಹಗಳಲ್ಲಿ ಸಾಕಷ್ಟಿವೆ. ಎಲ್ಲ ಕಾಲಕ್ಕೂ ಇವು ಸಲ್ಲುತ್ತವೆ.

ಬಹುಶಃ ಅನ್ಯಲೋಕಗಳು ಹಾಗೂ ಅನ್ಯಗ್ರಹವಾಸಿಗಳ ಬಗ್ಗೆ ಇರುವಷ್ಟೆ ಬೆರಗು ನಮ್ಮದೇ ಜೀವಿಲೋಕದ ಬಗ್ಗೆಯೂ ಇರುವುದರಿಂದಲೋ ಏನೋ ವೈಜ್ಞಾನಿಕ ಕಥೆ–ಕಾದಂಬರಿಗಳಲ್ಲಿ ಜೀವಿ, ಬುದ್ಧಿಮತ್ತೆ, ತಳಿವಿಜ್ಞಾನ, ಜೆನೆಟಿಕ್ ಇಂಜಿನಿಯರಿಂಗ್ ಅಥವಾ ಕುಲಾಂತರಿ ತಂತ್ರಜ್ಞಾನ, ಪರಿಸರ, ಜೀವಿಗೋಲಗಳ ಬಗ್ಗೆ ಸಾಕಷ್ಟು ಕಥೆಗಳನ್ನು ಕಾಣಬಹುದು. ಮೇರಿ ಶೆಲ್ಲಿ ಹೇಳಿದ್ದೂ ಇಂತಹುದೇ ಒಂದು ಕಥೆ. ಅತ್ಯಂತ ಸುಪ್ರಸಿದ್ಧವಾದ ವೈಜ್ಞಾನಿಕ ಸಿನೆಮಾ ಜುರಾಸಿಕ್ ಪಾರ್ಕಿನಲ್ಲಿಯೂ ದೈತ್ಯ ಡೈನೋಸಾರುಗಳು ಹಾಗೂ ಹುಚ್ಚ ವಿಜ್ಞಾನಿ ಇದ್ದಾನೆ. ಆಧುನಿಕ ವೈಜ್ಞಾನಿಕ ಕಥೆಗಳ ಹರಿಕಾರ ಎನ್ನಿಸಿದ ಎಚ್.ಜಿ.ವೆಲ್ಸನ ಇನ್ವಿಸಿಬಲ್ ಮ್ಯಾನ್ ಕಥೆಯಲ್ಲಿಯೂ ಅಷ್ಟೆ. ಒಬ್ಬ ಹುಚ್ಚ ವಿಜ್ಞಾನಿ, ಜೀವಿಗಳ ಬೆರಗು ಕಾಡುತ್ತದೆ. ಜೊತೆಗೆ ಒಂದಿಷ್ಟು ಫಿಸಿಕ್ಸ್ ತತ್ವಗಳೂ ಇವೆ.



**ಕಲಾವಿದ ಕಲ್ಪಿಸಿದ ಪ್ರಾಣಿ–ಮನುಷ್ಯರ ಸಂಕರವೆನ್ನಿಸಿದ ಫ್ರಾಂಕೆನ್‌ಸ್ಟೈನ್**

ಇದಕ್ಕೂ ಉತ್ತರ ಬಹಳವಿವೆ. ಸಾಹಿತ್ಯಕ ಕಥೆಗಳಲ್ಲಿ ಕಾಣುವ ಎಲ್ಲ ವಿಷಯಗಳೂ ವೈಜ್ಞಾನಿಕ ಕಥೆಗಳಿಗೆ ಒಪ್ಪಬಹುದು. ಹಾಗೆ ಒಪ್ಪಿಸುವ ಕಲೆಗಾರಿಕೆ ವೈಜ್ಞಾನಿಕ ಕಥೆಗಾರರಿಗೆ ಇದೆ. ವಿಜ್ಞಾನದ ಚೌಕಟ್ಟಿನೊಳಗೆ ಮಾನವನ ಭಾವನೆಗಳನ್ನು ಕೆದಕುವ ಎಲ್ಲ ವಿಷಯಗಳನ್ನೂ ಒಪ್ಪವಾಗಿ ಸೇರಿಸುವ ಕೆಲಸವನ್ನು ಮಾಡಿದವರಿದ್ದಾರೆ. ಐಸಾಕ್ ಅಸಿಮೋವ್ ಇಂತಹ ಪ್ರತಿಭಾವಂತ ಕಥೆಗಾರ. ಮಾನವನ ನಡವಳಿಕೆಗಳನ್ನು ಲೇವಡಿ ಮಾಡುತ್ತಲೇ ವಿಜ್ಞಾನವನ್ನೂ ಬೆರೆಸಿ ಕಥೆಗಳನ್ನು ಹೆಣೆಯುತ್ತಿದ್ದ. ಅವನ ಒಂದು ಕಥೆಯಲ್ಲಿ, ಅನ್ಯಗ್ರಹಗಳಿಂದ ಜೀವಿಗಳು ಭೂಮಿಗೆ ಬರುವ ಕಲ್ಪನೆ ಇದೆ. ಅವರ ಜೊತೆ ಹೇಗೆ ಸಂವಹಿಸುವುದು ಎನ್ನುವ ಬಗ್ಗೆ ಭೂಮಿಯ ವಿಜ್ಞಾನಿಗಳಲ್ಲಿ ಚರ್ಚೆ ನಡೆಯುತ್ತಿರುತ್ತದೆ. ಅದಕ್ಕಾಗಿ ಸಿದ್ಧತೆಗಳನ್ನೂ ಮಾಡಿಕೊಂಡಿರುತ್ತಾರೆ. ಆದರೆ ಹಾಗೆ ಭೂಮಿಗಿಳಿದ ಅನ್ಯಗ್ರಹ ಜೀವಿಗಳು ಮೊದಲು ಕೇಳುವ ಪ್ರಶ್ನೆ ಏನು ಗೊತ್ತೇ? ಕಿರುಬೆರಳನ್ನು ಎತ್ತಿ ತೋರಿ ಪ್ರಶ್ನಾರ್ಥಕವಾಗಿ ಮೂತ್ರಾಲಯ ಎಲ್ಲಿದೆ ಎಂದು ಕೇಳುತ್ತಾರೆ. ಈ ಕಥೆಯಲ್ಲಿ ಅನ್ಯಗ್ರಹಜೀವಿಗಳ ಜೊತೆಗೆ ಹೇಗೆ ಸಂಪರ್ಕ ಸಾಧಿಸಬೇಕು, ಬುದ್ಧಿವಂತ ಅನ್ಯಗ್ರಹಜೀವಿಗಳು ಇವೆಯೋ ಎನ್ನುವ ಅಪ್ಪಟ ವೈಜ್ಞಾನಿಕ ಪ್ರಶ್ನೆಗಳನ್ನು ಪರಿಚಯಿಸುತ್ತಲೇ ಮಾನವನ ನಡವಳಿಕೆಗಳನ್ನೂ ವಿಡಂಬಿಸುತ್ತಾರೆ ಅಸಿಮೋವ್.

ವೈಜ್ಞಾನಿಕ ಕಥೆಗಳ ವಿಷಯಗಳಲ್ಲಿ ಸಾಮಾನ್ಯವಾಗಿ ಚರ್ಚೆಯಾಗುವ ಎಲ್ಲ ವಿಷಯಗಳೂ ಇರಬಹುದು. ಪ್ರೀತಿ, ಪ್ರೇಮ, ರಾಗ, ದ್ವೇಷ ಮೊದಲಾದ ಭಾವನೆಗಳನ್ನು ಸ್ಫುರಿಸುವಾಗಲೇ ಈ ಕೆಲವು ಸಂಕೇತಗಳು

ಕನ್ನಡದಲ್ಲಿ ವೈಜ್ಞಾನಿಕ ಕಥೆಗಳನ್ನು ಬರೆದವರು ಕಡಿಮೆ. ಬೆರಳೆಣಿಕೆಯಷ್ಟು. ಇದಕ್ಕೆ ಕಾರಣವೇನೆನ್ನುವುದು ಅಧ್ಯಯನಕ್ಕೆ ತಕ್ಕ ವಿಷಯ. ಏಕೆಂದರೆ ಬೆರಗು ಹಾಗೂ ಅಚ್ಚರಿಯನ್ನು ಮೂಡಿಸುವ ಯಾವುದೇ ಕಥೆಯೂ ಜನಮೆಚ್ಚುಗೆ ಗಳಿಸಬೇಕು. ಆಪ್ತವೆನ್ನಿಸಬೇಕು. ಹಾಗಿದ್ದೂ ಈ ಪ್ರಕಾರದಲ್ಲಿ ಸಾಕಷ್ಟು ಸಾಧನೆ ಮಾಡಿದವರಿದ್ದಾರೆ. ಕನ್ನಡದ ಹಿರಿಯ ಸಾಹಿತಿ ಕೋಟ ಶಿವರಾಮ ಕಾರಂತರು ಕೂಡ ಒಂದು ವೈಜ್ಞಾನಿಕ ಕಥೆಯನ್ನು ಬರೆದಿದ್ದರು. ಇತ್ತೀಚೆಗೆ ಎಸ್. ಎಲ್. ಭೈರಪ್ಪನವರೂ ವೈಜ್ಞಾನಿಕ ಹಂದರವಿಟ್ಟುಕೊಂಡು ತಾತ್ವಿಕ ಚರ್ಚೆ ನಡೆಸಿದ "ಯಾನ" ಕಾದಂಬರಿಯನ್ನು ರಚಿಸಿದ್ದರಷ್ಟೆ. ರಾಜಶೇಖರ ಭೂಸನೂರ ಮಠ, ಹ.ಶಿ. ಭೈರನಟ್ಟಿ, ಸಂಜಯ ಹಾವನೂರ, ಸವಿತಾ ಶ್ರೀನಿವಾಸ, ಎಂ.ಎಸ್. ನರಹರಿ, ಶಾಂತಲಾ ಅನಿಲ್, ಸಪ್ನಾ ಕಟ್ಟಿ ಕನ್ನಡದಲ್ಲಿ ಹೆಸರಿಸಬಹುದಾದ ಕಥೆಗಾರರು. ಪ್ರೊ. ಕೆ. ಎನ್. ಗಣೇಶಯ್ಯ ವೈಜ್ಞಾನಿಕ ಕಥೆಗಳ ಕಾಲ ಹಾಗೂ ಸೀಮೆಯ ಮಿತಿಯನ್ನು ಮೀರಿ ಚರಿತ್ರೆಯನ್ನು ವಿಜ್ಞಾನದ ಜೊತೆಗೆ ಬೆರೆಸಿ ಕಲ್ಪನೆಯ ಮೂಸೆಗೆ ಹೊಯ್ದು ಹೊಸ ಬಗೆಯ ಕಥೆಗಳನ್ನು ಸೃಷ್ಟಿಸಿದ್ದಾರೆ. ಇವೆಲ್ಲ ಕಥೆಗಳ ರುಚಿಯನ್ನು ನಿಮಗೆ ಕುತೂಹಲಿ ಈ ಸಂಚಿಕೆಯಲ್ಲಿ ಒದಗಿಸುತ್ತಿದೆ. ವೈಜ್ಞಾನಿಕ ಕಥೆಗಳ ಸಾಧ್ಯತೆಗಳು ಅಗಾಧ. ಅವನ್ನು ಕನ್ನಡದ ಲೇಖಕರು ಇನ್ನು ಕಂಡುಕೊಳ್ಳಬೇಕಷ್ಟೆ. ಕುತೂಹಲಿಯ ಈ ಪ್ರಯತ್ನ ಅದಕ್ಕೆ ಇಂಬು ಕೊಡಬಹುದೇನೋ ಎನ್ನುವ ಆಶಯ.

*ಕೊಳ್ಳೇಗಾಲ ಶರ್ಮ ಕುತೂಹಲಿಯ ಸಂಪಾದಕರು*

# ಅಮೃತ ಸರೋವರ!

## ಚಾತ್ರೋತ್ತರೆ ಕಂಡ ಸರೋವರ ಯಾವುದು?

● ಪ್ರೊ. ಕೆ. ಎನ್. ಗಣೇಶಯ್ಯ

ಭಾಗ– 1

### ಆ ಲೋಕದಲ್ಲಿ ಒಂದು ದಿನ

ಆ ಬಾಲೆ ತನ್ನ ವಸತಿ ಸಂಕೀರ್ಣದ ಪ್ರವೇಶದ್ವಾರದ ಬಳಿ ಬರುತ್ತಿದ್ದಂತೆಯೆ "ಅಕ್ಕ.. ಅಕ್ಕ?" ಎಂದು ಎಳೆವಯಸ್ಸಿನ ಜೋರಾಗಿ ಕಿರುಚುತ್ತ ದಡಬಡನೆ ಒಳಕ್ಕೆ ಇಳಿದಳು. ಅವಳು ಆ ವಸತಿ ಸಂಕೀರ್ಣದಲ್ಲಿರುವ ತನ್ನ ಹಿರಿಯ ಅಕ್ಕಂದಿರಲ್ಲಿ ಯಾರಾದರೊಬ್ಬರ ಗಮನ ಸೆಳೆದು ತಕ್ಷಣ ತಾನು ಹೊತ್ತು ತಂದಿರುವ ದುರಂತದ ಸುದ್ದಿಯನ್ನು ಮುಟ್ಟಿಸಲು ಚಡಪಡಿಸುತ್ತಲೆ ಓಡಿ ಬಂದಿದ್ದಳು. ಆ ಬೃಹತ್ ವಸತಿ ಸಂಕೀರ್ಣದ ಪ್ರವೇಶದ್ವಾರದಲಿಯೇ ಇದ್ದ ಒಬ್ಬ ದೊಡ್ಡಕ್ಕ ಇತರೆ ಹೆಂಗಸರು ಮತ್ತು ಹೆಣ್ಣು ಮಕ್ಕಳು ತಂದಿದ್ದ ಸರಕು–ಸಾಮಾನುಗಳನ್ನು ಇಳಿಸಿಕೊಳ್ಳುವ ಕೆಲಸದಲ್ಲಿ ನಿರತಳಾಗಿದ್ದಳು. ಆಕೆ ತನ್ನತ್ತ ಕೂಗಿಕೊಂಡು ಬರುತ್ತಿದ್ದ ಆ ಬಾಲೆಯ ದುಗುಡವನ್ನು ಕಂಡರೂ ಯಾವುದೇ ಬಗೆಯಲ್ಲಿ ಪ್ರತಿಕ್ರಿಯಸಲಿಲ್ಲ. ಆದ್ದರಿಂದ ಆ ಬಾಲೆ ಆಕೆಯ ಗಮನ ಸೆಳೆಯಲೆಂದು ಮತ್ತೆ, "ಅಕ್ಕ.. ಅಕ್ಕ.. ದೊಡ್ಡ ಅನಾಹುತ?ದೊಡ್ಡ ಅನಾಹುತ?" ಎಂದು ಜೋರಾಗಿ ಕಿರುಚುತ್ತ ತರಾತುರಿಯಿಂದ ಆಕೆಯ ಬಳಿ ಹೋದಳು.

ಆದರೆ ಆ ಹಿರಿಯಕ್ಕ ಯಾವುದೇ ರೀತಿಯಲ್ಲಿ ಸ್ಪಂಧಿಸದೆ ಆ ಬಾಲೆ ಬರಿಗೈಲಿ ಹಿಂದಿರುಗಿರುವುದನ್ನು ಕಂಡು ದುರುಗುಟ್ಟಿ ನೋಡಿದಳು– ಮಾಡಬೇಕಿದ್ದ ಕೆಲಸಕ್ಕೆ ಕೈ ಹಚ್ಚದೆ ದಿನವನ್ನು ವ್ಯರ್ಥ ಮಾಡಿ ಹಿಂದಿರುಗಿರುವಳಲ್ಲ ಎಂದು ದೂರುವಂತೆ. ದೊಡ್ಡಕ್ಕನ ಆ ನಿರ್ದಾಕ್ಷಿಣ್ಯ ಹಾಗೂ ತೀಕ್ಷ್ಣವಾದ ದೃಷ್ಟಿಗೆ ಅಳುಕಿದ ಬಾಲೆ ತನ್ನ ದುಗುಡವನ್ನು ನಿಯಂತ್ರಿಸಿಕೊಳ್ಳುತ್ತ, ಆತುರತೆಯನ್ನು ಬದಿಗಿಟ್ಟು, ದುರಂತದ ಬಗ್ಗೆ ಹೇಳುವುದೋ ಬೇಡವೋ ಎಂದು ಅನುಮಾನಿಸುತ್ತ ಮೌನವಾಗಿ ಹಿಂದಕ್ಕೆ ಸರಿದಳು.

ಹಾಗೆ ಅಲ್ಲಿಗೆ ಬಂದ ಆ ಬಾಲೆಯ ಹೆಸರು ಚಾತ್ರೋತ್ತರೆ –1020. ಆ ಹೆಸರು ಬರಲು ಕಾರಣ ಅವರೆಲ್ಲರೂ ತಂಗಿದ್ದ ಆ ವಸತಿ ಸಂಕೀರ್ಣದ ರಚನೆಯ ಕ್ರಮ. ಭೂಗರ್ಭದಲ್ಲಿ ನಿರ್ಮಿತಗೊಂಡಿದ್ದ ಆ ಬೃಹತ್ ವಸತಿ ಸಂಕೀರ್ಣವನ್ನು ಒಂದು ದೊಡ್ಡ ನಗರವೆಂದೆ ಪರಿಗಣಿಸಬಹುದಾಗಿತ್ತು. ದಿಕ್ಕು ದಿಕ್ಕಿಗೂ ಹಲವಾರು ಅಂತಸ್ತುಗಳ ಗೃಹ ಗುಚ್ಚಗಳು; ಪ್ರತಿ ಅಂತಸ್ತಿನಲ್ಲೂ ಹಲವಾರು ಮನೆಗಳು; ಪ್ರತಿ ಮನೆಯಲ್ಲೂ ಹತ್ತಾರು ಕೊಟಡಿಗಳು.

ಆ ಬಾಲೆ ನೆಲೆಸಿದ್ದುದು ಆ ಮಹಾವಸತಿ ಸಂಕೀರ್ಣದ ಉತ್ತರ ದಿಕ್ಕಿನಲ್ಲಿರುವ ಗೃಹಗಳ ಗುಚ್ಚದ ನಾಲ್ಕನೆ ಅಂತಸ್ತಿನಲ್ಲಿ. ಹಾಗೆಂದೆ ಅವಳು ಚಾತ್ರೋತ್ತರೆ; ಅಂದರೆ ಉತ್ತರದ ಗೃಹಗುಚ್ಚದ ನಾಲ್ಕನೇ ಅಂತಸ್ತಿನ ಮನೆಯವಳು ಎಂದು. ಜೊತೆಗೆ ಅವಳು ಆ ನಾಲ್ಕನೆ ಅಂತಸ್ತಿನ 10ನೇ ಮನೆಯಲ್ಲಿದ್ದಳು ಹಾಗೂ ಆ ಮನೆಯಲ್ಲಿನ 20 ನೆಯ ಕೊಟಡಿಯಲ್ಲಿ ನೆಲೆಯಾಗಿದ್ದಳು.. ಹಾಗೆಂದೆ ಅವಳ ಹೆಸರು ಚಾತ್ರೋತ್ತರೆ 1020 ಎಂದು.

ಆ ಬಾಲೆ ತನ್ನ ಗದರಿಕೆಗೆ ಹೆದರಿ ಹಿಂದೆ ಸರಿಯುತ್ತಿದ್ದುದನ್ನು ಕಂಡ ದೊಡ್ಡಕ್ಕ ಅವಳತ್ತ ತಿರುಗಿ ಗಡಸು ದನಿಯಲ್ಲಿಯೇ ಕೇಳಿದಳು.

"ಏನದು ಅಷ್ಟು ಆತುರಾತುರವಾಗಿ ಹಿಂದಿರಿಗಿರುವೆಯಲ್ಲ? ಏನನ್ನೂ ತರಲಿಲ್ಲವೆ?




ಏನದು ದುರಂತ? ಏನಾಯಿತು?"

ಕೊನೆಗೂ ತಾನು ಹೇಳಬೇಕೆಂದಿದ್ದ ದುರಂತದ ಬಗ್ಗೆ ಆ ಅಕ್ಕ ಗಮನ ಹರಿಸಿದ್ದನ್ನು ಕಂಡು ಖುಷಿಯಾದ ಬಾಲೆ ಆಕೆಯ ಪ್ರಶ್ನೆಯಿಂದ ಕೊಂಚ ಧೈರ್ಯ ತಂದುಕೊಂಡು ಮೆಲುದನಿಯಲ್ಲಿ ಅಂಜುತ್ತಲೆ ಹೇಳಿದಳು.

"ದಶಾಗ್ನೇಯೆ–1608 ನೀರಿನಲ್ಲಿ ಕೊಚ್ಚಿಹೋಗಿಬಿಟ್ಟಳು ಅಕ್ಕ." ಆ ಹೆಸರು ಕೇಳಿದ ತಕ್ಷಣವೇ ದೊಡ್ಡಕ್ಕನ ತಲೆಯಲ್ಲಿ ಕಂಪ್ಯೂಟರ್ ಕೆಲಸ ಮಾಡುವಂತೆ ದಶಾಗ್ನೇಯೆಯ ಚಿತ್ರಣ ಸೃಷ್ಟಿಯಾಗಿತ್ತು. ದಶಾಗ್ನೇಯೆ ಎಂದರೆ ಆಗ್ನೇಯ ದಿಕ್ಕಿನಲ್ಲಿರುವ ಗೃಹಗುಚ್ಛದ 10ನೇ ಅಂತಸ್ತಿನಲ್ಲಿ ಇರುವವಳು ಎಂದು. ಆ ಹತ್ತನೇ ಅಂತಸ್ತಿನಲ್ಲಿರುವ 16ನೇ ಮನೆಯಲ್ಲಿ ನೆಲೆಯಾಗಿರುವ 25 ಹೆಣ್ಣುಮಕ್ಕಳಲ್ಲಿ 8ನೆಯವಳು ಈ ದಶಾಗ್ನೇಯೆ 1608. ಆಕೆ ಎಲ್ಲಿ, ಏಕೆ ಕೊಚ್ಚಿಹೋದಳು ಎಂದು ಕೇಳಿದಳು.

"ಅಮೃತ ಸರೋವರದಲ್ಲಿ" ಎಂದು ಉತ್ತರಿಸಿದಳು ಬಾಲೆ.

"ಅಮೃತ ಸರೋವರ? ಅದು ಎಲ್ಲಿದೆ?" ದೊಡ್ಡಕ್ಕನ ಪ್ರಶ್ನೆಗೆ ಉತ್ತರ ಕೊಡಲು ಚಾತ್ರೋತ್ತರೆ ಪ್ರಯತ್ನ ಪಡುತ್ತಿದ್ದಂತೆ, ಮತ್ತಿಬ್ಬರು ಅದೇ ವಯಸ್ಸಿನ ಬಾಲೆಯರು ಪ್ರವೇಶ ದ್ವಾರದ ಕಮಾನಿನ ಬಳಿ ಆತುರಾತುರವಾಗಿ ಗಾಬರಿಯಿಂದ ಇಳಿಯುತ್ತಿರುವುದು ಕಂಡಿತು. ಅವರೂ ಕೂಡ ಈ ಬಾಲೆಯ ಹಾಗೆ ಅತೀವ ದುಗುಡದಿಂದ ಬರುತ್ತಿರುವುದನ್ನು ಕಂಡ ದೊಡ್ಡಕ್ಕ ಅವರತ್ತ ದೃಷ್ಟಿ ಹಾಯಿಸಿ ಕಣ್ಣಲ್ಲಿಯೇ ಕೇಳಿದಳು: 'ಏನು ಸಮಾಚಾರ? ಯಾಕೆ ಈ ದುಗುಡ?' ಎನ್ನುವಂತೆ. ಆದರೆ ಈಗಾಗಲೆ ದೊಡ್ಡಕ್ಕನ ಮುಂದೆ ಚಾತ್ರೋತ್ತರೆ ನಡುಗುತ್ತ ನಿಂತಿರುವುದನ್ನು ಕಂಡ ಅವರಿಬ್ಬರಿಗೂ, ಅವಳು ದೊಡ್ಡಕ್ಕನಿಗೆ ಎಲ್ಲವನ್ನೂ ತಿಳಿಸಿರುತ್ತಾಳೆ ಎಂದೂ, ಅದಕ್ಕಾಗಿಯೇ ಈ ದೊಡ್ಡಕ್ಕ ತಮ್ಮನ್ನು ಹಾಗೆ ದುರುಗುಟ್ಟಿ ನೋಡುತ್ತಿರಬಹುದು ಎಂದೂ ಊಹಿಸಿದರು. ಹಾಗೆಂದೆ ಅವರಲ್ಲಿ ಒಬ್ಬಳು ಹೆದರುತ್ತ, ಅಳುವಿನ ದನಿಯಲ್ಲಿಯೇ ಹೇಳಿದಳು.

"ಇದರಲ್ಲಿ ನಮ್ಮ ತಪ್ಪು ಏನೂ ಇಲ್ಲ ಅಕ್ಕ. ಅವಳೆ, ದಶಾಗ್ನೇಯೆಯೆ ನಮ್ಮನ್ನೂ ಆ ಸರೋವರಕ್ಕೆ ಕರೆದೊಯ್ದದ್ದು" ಎಂದಳು. ಅದೆಲ್ಲವನ್ನೂ ಕೇಳಿದ


ಚಿತ್ರ: ಎಚ್ ವಿ ಸೋಮಸುಂದರ

ಆ ದೊಡ್ಡಕ್ಕನಿಗೆ ಏನೂ ಅರ್ಥವಾಗದೆ, ಮತ್ತೆ ಗದರುವ ದನಿಯಲ್ಲಿಯೇ,

'ಯಾವ ಸರೋವರ? ಇವಳು ಹೇಳಿದ ಅಮೃತ ಸರೋವರವೆ? ಎಲ್ಲಿದೆ ಅದು? ಅಲ್ಲಿಗೆ ಯಾಕೆ ಕರೆದೊಯ್ದಳು?" ಎಂದು ಮೂರನೆಯವಳತ್ತ ತಿರುಗಿ ಕೇಳಿದಳು. ಆ ಮೂರನೆಯವಳು, ಸ್ವಲ್ಪವೂ ಹೆದರದೆ ಎಲ್ಲವನ್ನೂ ವಿವರವಾಗಿ ಹೇಳತೊಡಗಿದಳು.

"ಇದೆಲ್ಲವೂ ಪ್ರಾರಂಭವಾದದ್ದು ಮೂರು ದಿನದ ಹಿಂದೆ ದೊಡ್ಡಕ್ಕ.. ದಶಾಗ್ನೇಯೆ–1608 ನಿನ್ನೆ ನಮ್ಮೊಂದಿಗೆ ಒಂದು ವಿಚಿತ್ರ ಅನುಭವವನ್ನು ಹಂಚಿಕೊಂಡಿದ್ದಳು. ಮೂರು ದಿನದ ಹಿಂದೆ ತನ್ನ ಎಂದಿನ ಕೆಲಸಕ್ಕೆಂದು ಅವಳು ಹೊರಗೆ ಹೋಗಿದ್ದಾಗ, ನೈರುತ್ಯ ದಿಕ್ಕಿನಲ್ಲಿ, ಸುಮಾರು ದೂರದಲ್ಲಿ ಅವಳ ಮೂಗಿಗೆ ಅತೀ ಪಸಂದಾದ ವಾಸನೆಯೊಂದು ತಟ್ಟಿತಂತೆ. ಆ ವಾಸನೆಯಿಂದ ಆಕರ್ಷಿತಳಾಗಿ, ಅಲ್ಲೆಲ್ಲ ಹುಡುಕಾಡಿದಾಗ ಅವಳಿಗೆ ಕಂಡದ್ದು ಒಂದು ಬಿಳೀ ಬಣ್ಣದ, ನುಣುಪಾದ ದೊಡ್ಡ ಪರ್ವತ. ಅದರ ಆಕಾರವನ್ನು ಅವಳು ಕಾಲಲ್ಲಿ ಬರೆದು ತೋರಿಸಿದಳು ಕೂಡ. ಅವಳು ಬರೆದದ್ದು ಸುಮಾರು ಹೀಗಿತ್ತು" ಎಂದು ಆ ಬಾಲೆ ತಾನೂ ತನ್ನ ಕಾಲುಗಳಿಂದ ಅಲ್ಲಿ ನೆಲದಮೇಲೆ ಬರೆದು ತೋರಿಸಿದಳು.

ಅದನ್ನು ನೋಡಿದ ದೊಡ್ಡಕ್ಕ ಉದಾಸೀನದಿಂದ ಕೇಳಿದಳು. "ಇದು ಪರ್ವತವೆ? ಪರ್ವತ ಹೀಗಿರುತ್ತದೆಯೆ?'

'ನೀವು ಹೇಳುವುದು ನಿಜ ಅಕ್ಕ. ನಾವು ಅಲ್ಲಿ ಹೋಗಿ ನೋಡಿದಾಗ ನಮಗೂ ಅದು ಪ್ ರ್ ವ್ ತ್ ದ್ ಂ ತೆ ಕಾಣಲಿಲ್ಲ. ಬದಲಿಗೆ ಇನ್ನೂ ವಿಚಿತ್ರವಾಗಿತ್ತು. ಅದರ ಬಗ್ಗೆ ಆನಂತರ ಹೇಳುತ್ತೇನೆ. ಅದಕ್ಕೂ ಮುನ್ನ ಅವಳು ನಮಗೆ ಹೇಳಿದ ಅನುಭವ ಹೇಳುತ್ತೇನೆ." ಎಂದು ಮುಂದುವರಿಸಿದಳು.



"ತಾನು ಕಂಡ ಆ ಪರ್ವತದ ಕೆಳಗೆ ದಶಾಗ್ನೇಯೆ–1608 ಆ ವಾಸನೆಯ ಮೂಲವನ್ನು ಹುಡುಕಾಡುತ್ತಿರಬೇಕಾದರೆ ಅಲ್ಲೆಲ್ಲ ಯಾವುದೋ ಒಂದು ದ್ರವ್ಯವು ಹನಿ ಹನಿಯಾಗಿ ಅಲ್ಲಲ್ಲಿ ಚೆಲ್ಲಿದಂತೆ ಹರಡಿ ಬಿದ್ದಿತ್ತಂತೆ. ಇನ್ನೂ ವಿಚಿತ್ರ ಎಂದರೆ, ಹಾಗೆ ನೆಲದಲ್ಲಿ ಹನಿ ಹನಿಯಾಗಿ ಚೆಲ್ಲಿದ್ದ ಆ ದ್ರವ್ಯವೆ ಅವಳಿಗೆ ತಟ್ಟಿದ ಆ ಸುವಾಸನೆಯನ್ನು ಸೂಸುತ್ತಿತ್ತಂತೆ. ಆ ದ್ರವ್ಯ ಏನಿರಬಹುದು ಎಂದು ಇವಳು ಕೊಂಚ ರುಚಿ ನೋಡಲು ಪ್ರಯತ್ನಿಸಿದ್ದಾಳೆ? ಅದರಿಂದಲೇ ಅವಳು ಈ ದುರಂತಕ್ಕೆ ಬಲಿಯಾದದ್ದು."

"ಯಾಕೆ ಏನಾಯಿತು? ಆ ದ್ರವ್ಯ ವಿಷಕಾರಿಯಾಗಿತ್ತೆ?"

"ಅಲ್ಲವೇ ಅಲ್ಲ. ಬದಲಿಗೆ ಅದು ನಂಬಲಾಗದಷ್ಟು ಸಿಹಿಯಾದ, ಒಂದು ರೀತಿಯಲ್ಲಿ ವಿಶಿಷ್ಟವಾದ ಆದರೆ ಸೊಗಸಾದ ರುಚಿಯ ದ್ರವ್ಯವಾಗಿತ್ತಂತೆ. ಅದು ಅದೆಷ್ಟು ರುಚಿಯಾಗಿತ್ತೆಂದರೆ, ಅವಳು ಕತೆಗಳಲ್ಲಿ ಕೇಳಿದ್ದ ಅಮೃತ ಎಂದರೆ ಇದೇ ಇರಬಹುದೇನೋ ಎಂದು ಸಂದೇಹ ಬರುವಷ್ಟು ಪಸಂದಾಗಿತ್ತಂತೆ."

"ಅಮೃತದಷ್ಟು ಸೊಗಸಾದ ದ್ರವ್ಯ? ಏನದು?"

"ಅವಳು ಆ ದ್ರವ್ಯದ ರುಚಿಗೆ, ಅದರ ಪಸಂದಾದ ವಾಸನೆಗೆ ಸೋತು, ಅದರ ಮೂಲಕ್ಕೆ ಹುಡುಕಾಡಿದ್ದಾಳೆ. ಅ ದ್ರವ್ಯ ಎಲ್ಲಿಂದ ಬಂತು? ಯಾರೋ ತಮ್ಮ ಕೈಯಿಂದ ಚೆಲ್ಲಿರಬಹುದೆ? ಅಥವ ಅಲ್ಲೆ ಎಲ್ಲಾದರೂ ಅದರ ಮೂಲ ಇದ್ದು, ಆ ಮೂಲದಿಂದ ಹೇಗೋ ಚೆಲ್ಲಿ ಹಾಗೆ ಹರಡಿರಬಹುದೆ ಎಂದು ಅಲ್ಲೆಲ್ಲ ಹುಡುಕಾಡಿದ್ದಾಳೆ. ಆಗ ಕಂಡದ್ದು ಆ ನುಣುಪಾದ ಬಿಳಿ ಪರ್ವತದ ಬುಡದಲ್ಲಿ ಅದರ ಮೂಲದ ಸುಳಿವು."

"ಸುಳಿವು? ಬುಡದಲ್ಲಿ? ಹೇಗೆ?"

"ಆ ದ್ರವ್ಯವು ಪರ್ವತದ ನುಣುಪಾದ ಮೈಮೇಲೆಲ್ಲ ಮೇಲಿನಿಂದ ಕೆಳಕ್ಕೆ ಹರಿದು ಸಣ್ಣ ಎಳೆಗಳಲ್ಲಿ ಕೆಳಗೆ ಸೋರಿತ್ತಂತೆ. ಅದರಿಂದಾಗಿ ಕೆಲವೆಡೆ ತುದಿಯಿಂದ ಬುಡದವರೆಗೆ ದ್ರವ್ಯದ ಒಣಗಿದ ಎಳೆಗಳು ಕಂಡವಂತೆ. ಹಾಗಾಗಿ ಈ ದ್ರವ್ಯದ ಮೂಲ ಎಲ್ಲೋ ಈ ಪರ್ವತದ ಮೇಲೆಯೇ ಇರಬೇಕು ಎಂದು ಯೋಚಿಸಿ ಮೇಲೆ ಹತ್ತಲು ಪ್ರಾರಂಭಿಸಿದಳಂತೆ. ಅವಳಿಗೆ ಆ ದ್ರವ್ಯದ ರುಚಿ ಅದೆಷ್ಟು ಹುಚ್ಚು ಹಿಡಿಸಿತ್ತೆಂದರೆ ಪರ್ವತದ ಮೈಮೇಲೆ ಸೋರುತ್ತ ಇಳಿದಿದ್ದ ಆ ದ್ರವ್ಯದ ಹಾದಿಯಲ್ಲಿಯೇ ಅದನ್ನು ಅಲ್ಲಲ್ಲಿ ರುಚಿ ನೋಡಿ ಚಪ್ಪರಿಸುತ್ತ ಹತ್ತಿದಳಂತೆ. ಹಾಗೆ ಮಾಡಿದ್ದರಿಂದ ಆ ದ್ರವ್ಯದಲ್ಲಿ

ಏನಿತ್ತೋ ಏನೋ ಅವಳ ತ್ರಾಣವೂ ಹೆಚ್ಚಿತ್ತಂತೆ." ಎಂದು ಆ ಪರ್ವತದ ಚಿತ್ರದ ಮೇಲೆ ಎಳೆಗಳನ್ನು ಬರೆದು ತೋರಿಸಿದಳು.

"ಆಹಾ. ಕೊನೆಗೂ ಅದರ ಮೂಲ ಸಿಕ್ಕಿತೆ?" ದೊಡ್ಡಕ್ಕನ ಆ ಪ್ರಶ್ನೆ ಮತ್ತು ಆ ಪ್ರಶ್ನೆಯಲ್ಲಿ ತುಂಬಿದ್ದ ಕಾತುರತೆ ಕಂಡು ಆ ಮೂವರಿಗೂ ಖುಷಿಯಾಗಿತ್ತು. ನಡೆದದ್ದನ್ನೆಲ್ಲ ವಿವರಿಸುತ್ತಿದ್ದ ಮೂರನೆಯ ಬಾಲೆಗೂ ಇನ್ನೂ ಹೆಚ್ಚಿನ ಹುಮ್ಮಸ್ಸು ಮೂಡಿತ್ತು. ಹಾಗಾಗಿ ಮುಂದುವರಿಸಿದಳು.



"ಹೌದು. ಕೊನೆಗೂ ಅದರ ಮೂಲ ಕಂಡು ಹಿಡಿದಿದ್ದಳು. ಆ ಪರ್ವತ ಹತ್ತಿದ ಮೇಲೆ ಆಕೆಗೆ ಕಂಡದ್ದು ಅಲ್ಲೊಂದು ದೊಡ್ಡ ಪ್ರಪಾತ. ಪರ್ವತದ ದೇಹದೊಳಗೆ ಇಳಿಬಿದ್ದಿದ್ದ ಆಳವಾದ ಪ್ರಪಾತ. ಆ ದ್ರವ್ಯವು ಆ ಪ್ರಪಾತದಲ್ಲಿತ್ತಂತೆ. ಅದನ್ನೆ ಅವಳು ಅಮೃತಸರೋವರ ಎಂದದ್ದು."

"ಪರ್ವತದ ಮೇಲೆ ಒಂದು ಪ್ರಪಾತ? ಅಲ್ಲೊಂದು ಸರೋವರ? ಆ ಪ್ರಪಾತದ ಒಳಗೆ ಇಳಿದಿದ್ದಳೆ?"

"ಹೌದು. ನಾವೂ ಇಂದು ಆ ಪ್ರಪಾತ ನೋಡಿದೆವು ಅದು ಹೀಗಿದೆ ಎಂದು ಮತ್ತೊಂದು ಚಿತ್ರ ಬರೆದಳು.



"ಅವಳು ಆ ಪ್ರಪಾತದಲ್ಲಿ ಇಳಿದದ್ದ ಕಾರಣದಿಂದಲೆ ಅಂದು ಮನೆಗೆ ಹಿಂದಿರುಗಿಲಾಗಿಲ್ಲ. ಏಕೆಂದರೆ ಆ ಪ್ರಪಾತದಲ್ಲಿ ಅಘಾದವಾದಷ್ಟು ಅಮೃತವನ್ನು ಕಂಡಿದ್ದಳು. ಅದನ್ನು ಸವಿಯುತ್ತ ಬಹಳ ಕಾಲ ಅಲ್ಲಿಯೇ ಕಳೆದುಬಿಟ್ಟಳಂತೆ. ಕೊನೆಗೆ ಸಂಜೆಯಾಗುತ್ತಿದ್ದಂತೆ ಆ ಪ್ರಪಾತದಿಂದ ಮತ್ತೆ ಕಡಿದಾದ ಒಳಮೇಲ್ಮೈ ಮೇಲೆ ಹತ್ತಿ ಪರ್ವತದ ತುದಿಗೆ ಬರಲು ಹರಸಾಹಸ ಮಾಡಿದಳಂತೆ. ಅಷ್ಟರಲ್ಲಿ ರಾತ್ರಿಯಾಗಿ, ಕತ್ತಲಲ್ಲಿ ಪರ್ವತ ಇಳಿಯಲು ಸಾಧ್ಯವಾಗದೆ, ಅಲ್ಲಿಯೇ ಪರ್ವತದ ತುದಿಯಲ್ಲಿ, ಆ ಪ್ರಪಾತದ ಕಂಟದ ಮೇಲೆ ಮಲಗಿ ಮರುದಿನ ಮುಂಜಾನೆ ಹೇಗೋ ಪರ್ವತ ಇಳಿದು ಬಂದಿದ್ದಳು. ಬಂದು ನಮಗೆಲ್ಲರಿಗೂ ತನ್ನ ಸಂಪೂರ್ಣ ಅನುಭವ ಹೇಳಿದಾಗ ನಾವು ನಿಜಕ್ಕೂ ನಂಬಿರಲಿಲ್ಲ. ಆದರೆ ಅದರ ಬಗ್ಗೆ ನಮಗೆ ಕುತೂಹಲ ತಡೆಯಲಾಗಲಿಲ್ಲ. ಹಾಗಾಗಿ ಇಂದು ನಾವೇ ಅವಳೊಂದಿಗೆ ಅಲ್ಲಿಗೆ ಹೋಗಿದ್ದೆವು."

"ಆಹ್ಹಾ! ಹೇಗಿದೆ ಆ ದ್ರವ್ಯ? ಆ ಸರೋವರ ಎಷ್ಟು ದೊಡ್ಡದು?"

"ಆ ದ್ರವ್ಯಕ್ಕೆ ಅದ್ಭುತವಾದ ಸುವಾಸನೆ ಇದೆ. ಅನನ್ಯವಾದ ರುಚಿ ಇದೆ. ಆದರೆ ಏಕೋ ಏನೋ ಒಳಗೆ ಪ್ರಪಾತದಲ್ಲಿರುವ ದ್ರವ್ಯ ಅಷ್ಟು ಸಿಹಿಯಾಗಿಲ್ಲ ಹೊರಗೆ ಚೆಲ್ಲಿರುವ ದ್ರವ್ಯ ಅತೀ ರುಚಿಕರವಾಗಿದೆ ಅನಿಸಿತು. ಬಹುಷಃ ಸರೋವರದಲ್ಲಿನ ಅಮೃತದಲ್ಲಿ ಅಷ್ಟು ಸಾಂದ್ರತೆ ಇರಲಿಲ್ಲ.. ಆದರೂ ಆ ಸರೋವರ ಅದೆಷ್ಟು ದೊಡ್ಡದಾಗಿತ್ತೆಂದರೆ ಅದರಲ್ಲಿರುವ ಅಮೃತವನ್ನು ನಮ್ಮ ಇಡೀ ಈ ವಸತಿ ಸಂಕೀರ್ಣದ ಎಲ್ಲ ಸೋದರಿಯರಿಗೂ, ನಮ್ಮ ರಾಣಿಗೂ ಒದಗಿಸಬಹುದು."

"ಆಯಿತು. ಅದರ ಬಗ್ಗೆ ಆಮೇಲೆ. ಈ ದಶಾಗ್ನೇಯ–1308 ಯಾವ ದುರಂತಕ್ಕೆ ಸಿಕ್ಕಿ ಹಾಕಿಕೊಂಡಳು?"

"ನಾವು ನಾಲ್ವರೂ ಸೇರಿ ಇಂದು ಆ ಪರ್ವತ ಹತ್ತಿ.. ಆ ಪ್ರಪಾತ ಇಳಿದು ಸರೋವರದ ದಡ ತಲುಪಿ, ಎಚ್ಚರಿಕೆಯಿಂದ ಸರೋವರದ ಅಮೃತವನ್ನು ಸವಿಯುತ್ತಿದ್ದೆವು. ಇದ್ದಕ್ಕಿದ್ದಂತೆ ಎಲ್ಲಿಂದಲೋ ತಿಳಿಯದು, ಒಂದು ದೊಡ್ಡ ಪ್ರವಾಹ ಬರ್ರನೆ ಶಬ್ಧ ಮಾಡುತ್ತ ರಭಸದಿಂದ ಹರಿದು ಬಂದಿತ್ತು. ಈ ಇಡೀ ಸರೋವರವನ್ನೆ ಸುಳಿಯಂತೆ ಗಿರ್ರನೆ ತಿರುಗಿಸಿ ಕ್ಷಣಾರ್ಧದಲ್ಲಿ ಎಲ್ಲವನ್ನೂ ತನ್ನೊಂದಿಗೆ ಸೆಳೆದೊಯ್ದುಬಿಟ್ಟಿತು. ಆ ಸುಳಿ ಅದೆಷ್ಟು ರಭಸದಲ್ಲಿತ್ತೆಂದರೆ ಸರೋವರದ ದಡದಲ್ಲಿಯೇ ಇದ್ದ ದಶಾಗ್ನೇಯೆಯನ್ನು ಕೂಡ ಅದು ತನ್ನೊಂದಿಗೆ ಸೆಳೆದುಕೊಂಡು, ಅವಳನ್ನು ಒಳಗೆ ಮುಳುಗಿಸಿ ಗಿರಗಿರನೆ ತಿರುಗಿಸಿ ಅದೆತ್ತಲೋ ಸೆಳೆದೊಯ್ದುಬಿಟ್ಟಿತು. ಒಂದೇ ಕ್ಷಣದಲ್ಲಿ ಸುಳಿವೇ ಇಲ್ಲದಂತೆ ಅವಳು ಮಾಯವಾಗಿಬಿಟ್ಟಿದ್ದಳು. ಎರಡೇ ಕ್ಷಣ. ನಂತರ ಎಲ್ಲವೂ ಶಾಂತವಾಗಿತ್ತು. ಮತ್ತೆ ಸರೋವರದಲ್ಲಿ ಸ್ವಚ್ಚವಾದ ಜಲ ಬಂದಿತ್ತು. ಈಗ ಆ ಸರೋವರದ ತಳವೂ ಸ್ಪಷ್ಟವಾಗಿ ಕಾಣುವಷ್ಟು ತಿಳಿಯಾಗಿತ್ತು ಆ ಸರೋವರದ ದ್ರವ್ಯ. ವಿಚಿತ್ರ ಎಂದರೆ ಆ ಪ್ರವಾಹ ಬಂದು ಹೋದಮೇಲೆ ಆ ದ್ರವ್ಯದಲ್ಲಿ ಆ ಅಮೃತದ ಸುಳಿವೇ ಇರಲಿಲ್ಲ." ಎಂದಳು ದುಃಖದ ದನಿಯಲ್ಲಿ.

"ನೀವು? ನೀವು ಹೇಗೆ ತಪ್ಪಿಸಿಕೊಂಡಿರಿ?"

"ಅದೊಂದು ಪವಾಡವೆ ಸರಿ. ನಾವು ಅವಳಿಗಿಂತ, ಅಂದರೆ ಸರೋವರದ ದ್ರವದ ಮಟ್ಟಕ್ಕಿಂತ ಸ್ವಲ್ಪ ಮೇಲೆ ಇದ್ದೆವು. ಹಾಗಾಗಿ ನಾವು ಬಚಾವಾದೆವು. ತಕ್ಷಣ ಅಲ್ಲಿಂದ ಪ್ರಪಾತ ಹತ್ತಿ, ಲಗುಬಗೆಯಿಂದ ಪರ್ವತ ಇಳಿದು ಹಿಂದಿರುಗಿದೆವು. ನಿಮಗೆಲ್ಲರಿಗೂ ಅಲ್ಲಿ ನಡೆದ ಅನಾಹುತದ ಬಗ್ಗೆ ತಿಳಿಸಲೆಂದು ಬೇಗ ಬೇಗ ಬಂದೆವು."

"ಆಯಿತು. ಒಳಗೆ ನಡೆಯಿರಿ. ಆ ಸರೋವರದ ಬಗ್ಗೆ ಆ ನಂತರ ಚರ್ಚಿಸೋಣ. ಮತ್ತಷ್ಟು ಸೋದರಿಯರನ್ನು ನಿಮ್ಮೊಂದಿಗೆ ಕಳುಹಿಸುತ್ತೇನೆ. ಅದೇನೆಂದು, ಎಷ್ಟು ಉಪಯುಕ್ತ ಎಂದು ಪರಿಶೀಲಿಸೋಣ" ಎಂದು ಅವರನ್ನು ನಗರದ ಒಳಗೆ ಕಳುಹಿಸಿದಳು.

## ಭಾಗ 2:

## ನಮ್ಮ ಲೋಕದಲ್ಲಿ ಅದೇ ದಿನ

"ಅಪ್ಪಾಜಿ. ಒಂದು ನಿಮಿಷ ಇಲ್ಲಿ ಬನ್ನಿ."

ಮಗಳು ಪುಣ್ಯಳ ಕರೆಯಲ್ಲಿ ಏನೋ ದುಗುಡ ಇತ್ತು. ಹಾಗೆಂದೆ ತಕ್ಷಣ ಪುಣ್ಯಳ ಕೊಟಡಿ ಹೊಕ್ಕೆ. ಅವಳು ಟಾಯ್ಲೆಟ್ ಬಳಿ ನಿಂತು ಏನನ್ನೋ ನೋಡುತ್ತಿದ್ದಳು. ಒಳಹೊಕ್ಕು ಏನೆಂದು ಕೇಳಿದೆ. ತನ್ನ ಕೈಯನ್ನು ಕಮೋಡ್ ನ ಒಳಗೆ ತೋರಿಸುತ್ತ ಹೇಳಿದಳು.

"ಇಲ್ಲಿ ನೋಡಿ ಈ ಇರುವೆಗಳು. ನನ್ನ ಕಮೋಡ್ ನಲ್ಲಿ ಅವುಗಳಿಗೇನು ಕೆಲಸ? ಯಾಕೆ ಬಂದಿವೆ?"

ನಾನೂ ನೋಡುತ್ತ ನಿಂತೆ. ಪುಣ್ಯ ಮತ್ತೆ ಹೇಳಿದಳು.

"ನಾನು ಮೊನ್ನೆ ಇಲ್ಲಿ ಕಮೋಡ್ ನ ಕೆಳಗೆ ಒಂದು ಇರುವೆ ನೋಡಿದ್ದೆ. ನೆಲದ ಮೇಲೆ ಒಂದೆಡೆ ಒಂದು ಸಣ್ಣ ಹನಿ ಬಿದ್ದಂತೆ ಇತ್ತು. ಆ ಇರುವೆ ಅದರ ಒಂದು ಬದಿಯಲ್ಲಿ ನಿಂತು ಅದರ ರುಚಿಯನ್ನು ಪರೀಕ್ಷಿಸುತ್ತಿದ್ದಂತೆ ಕಂಡಿತು. ಅದು ಏನೋ ಎಂದು ಅಷ್ಟಾಗಿ ಅದರತ್ತ ಗಮನ ಹರಿಸಲಿಲ್ಲ, ಆದರೆ ಇಂದು ಈ ನಾಲ್ಕೂ ಇರುವೆಗಳು ಕಮೋಡಿನ ಒಳಗೆ ಹೋಗಿವೆ. ಏಕೆ?"

ನಾನು ಗಮನಿಸುತ್ತಿದ್ದಂತೆ ಕಮೋಡಿನಲ್ಲಿನ ನೀರು ಕೊಂಚ ಹಳದಿ ಬಣ್ಣಕ್ಕೆ






ತಿರುಗಿತ್ತು. ಆ ನಾಲ್ಕೂ ಇರುವೆಗಳು ಆ ನೀರಿನ ಸುತ್ತ ಓಡಾಡುತ್ತಿದ್ದವು. ನನಗೆ ತಕ್ಷಣ ಹೊಳೆಯಿತು.

"ಮಗಳೆ ನಿಮ್ಮ ತಾತ ಎಲ್ಲಿ?" ಎಂದೆ.

"ಹೊರಗೆ ಹೋಗಿದ್ದಾರೆ" ಎಂದಳು.

"ಅವರನ್ನು ಕರೆದು ತಾ" ಎಂದು ಹೇಳಿ ನಾನು ಹಾಲಿಗೆ ಹಿಂದಿರುಗಿದೆ.

***

ಸ್ವಲ್ಪ ಸಮಯದ ನಂತರ ಪುಣ್ಯ ನಮ್ಮ ತಂದೆಯನ್ನು ಕರೆದು ತಂದಿದ್ದಳು. ಅವರು ಮೂರು ದಿನದ ಹಿಂದೆ ತಾನೆ ಊರಿಂದ ಬಂದಿದ್ದರು. ಮೊದಲಿನಿಂದ ಮೊಮ್ಮಗಳು ಪುಣ್ಯ ಜೊತೆ ಇದ್ದ ರೂಡಿ. ಹಾಗಾಗಿ ಅವಳ ಕೊಟಡಿಯಲ್ಲಿಯೇ ಮಲಗುತ್ತಿದ್ದರು. ಅವಳ ಬಾತ್ ರೂಮ್ ಅನ್ನೆ ಉಪಯೋಗಿಸುತ್ತಿದ್ದರು.

ಪುಣ್ಯಳ ಜೊತೆ ಬಂದ ನಮ್ಮ ತಂದೆಯನ್ನು ಹಾಲ್‌ನಲ್ಲಿ ಟೇಬಲ್ ಬಳಿ ಕುಳ್ಳಿರಿಸಿ ಗ್ಲುಕೋ ಮೀಟರ್ ನಿಂದ ಅವರ ರಕ್ತ ಪರಿಶೀಲಿಸಿದೆ. ಅದರ ಮೀಟರ್ 250 ತೋರಿಸುತ್ತಿತ್ತು. ಅದುವರೆಗೆ ಅವರಿಗೆ ಡಯಾಬಿಟಿಸ್ ಇದೆ ಎಂದು ತಿಳಿದಿರಲಿಲ್ಲ. ಹಾಗಾಗಿ ಕೇಳಿದೆ.

"ಅಣ್ಣ ನಿಮಗೆ ಶುಗರ್ ಇದೆ. ನೋಡಿಕೊಂಡಿರಲಿಲ್ಲವೆ?"

"ಮೊನ್ನೆ ತಾನೆ ಡಾಕ್ಟರ್ ಹೇಳಿದರಪ್ಪ. ಬಾರ್ಡರ್ ನಲ್ಲಿದೆ ಟ್ಯಾಬ್ಲೆಟ್ ಶುರು ಮಾಡಿದರೆ ಉತ್ತಮ ಎಂದರು. ಇನ್ನೂ ಶುರು ಮಾಡಿಲ್ಲ." ಎಂದರು.

"ಇಂದೇ ಶುರು ಮಾಡಿ ಅಣ್ಣ. ನಿಧಾನ ಮಾಡಬೇಡಿ. ನಿಮಗೆ ಶುಗರ್ ಇರುವುದು ಬಾತ್ ರೂಮಿನಲ್ಲೂ ಕಾಣುತ್ತಿದೆ" ಎಂದೆ. ಪುಣ್ಯ ಮತ್ತು ಅವರು ನನ್ನ ಮುಖವನ್ನೇ ನೋಡುತ್ತಿದ್ದರು. ವಿವರಿಸಿ ಹೇಳತೊಡಗಿದೆ.

"ಮಗಳೆ ನಿಮ್ಮ ತಾತ ಡಯಾಬಿಟಿಕ್ ಆಗಿದ್ದಾರೆ. ಹಾಗಾಗಿ ಅವರ ಮೂತ್ರದಲ್ಲಿ ಸಕ್ಕರೆ ಅಂಶ ಹೆಚ್ಚಾಗಿದೆ. ಆ ಮೂತ್ರ ಟಾಯ್ಲೆಟ್ ನಲ್ಲಿ ಕೆಳಗೆ ನೆಲದ ಮೇಲೆಮ್ ಬಿದ್ದಾಗ ಅದನ್ನು ವಾಸನೆಯ ಮೂಲಕವೆ ಇರುವೆಗಳು ಕಂಡುಹಿಡಿದಿವೆ. ನಿನ್ನೆ ನೀನು ನೋಡಿದ ಆ ಇರುವೆ ಹಾಗೆ ಆ ಮೂತ್ರಕ್ಕೆ ಆಕರ್ಷಿತಗೊಂಡ ಇರುವೆ. ಆ ಇರುವೆ ಬಹುಷಃ ಅಲ್ಲಿ ಸಕ್ಕರೆಯ ದ್ರವ್ಯ ಇರುವ ವಿವರವನ್ನು ತನ್ನ ಗೂಡಿಗೆ ಹೊತ್ತೊಯ್ದು ಇತರೆ ಇರುವೆಗಳನ್ನು ಇಂದು ಕರೆತಂದಿದೆ. ನಿಮ್ಮ ತಾತನ ಮೂತ್ರದ ಶೇಷಾಂಶ ಕಮೋಡ್ ನಲ್ಲಿ ಉಳಿದಿರುವುದರಿಂದ ಆ ನಾಲ್ಕೂ ಇರುವೆಗಳು ಅಲ್ಲಿಗೂ ಹುಡುಕಿ ಹೋಗಿವೆ– ಅಲ್ಲಿಯ ಸಕ್ಕರೆಯ ನೀರನ್ನು ಸೇವಿಸಲು .." ಎಂದೆ.

"ಹೋ. ಅಯ್ಯೋ ಪಾಪ. ನೀವು ಇತ್ತ ಬಂದ ಮೇಲೆ ನಾನು ತಕ್ಷಣ ಕಮೋಡ್ ಫ್ಲಶ್ ಮಾಡಿದೆ ಆಗ ಒಂದು ಇರುವೆ ಕೊಚ್ಚಿಕೊಂಡು ಹೋಗಿಬಿಟ್ಟಿತು. ಉಳಿದ ಮೂರು ಹೇಗೋ ತಪ್ಪಿಸಿಕೊಂಡವು" ಎಂದಳು.

"ಚಿಂತಿಸಬೇಡ ಅವೆಲ್ಲವೂ ನಿನ್ನ ಹಾಗೆ ಹೆಣ್ಣು ಮಕ್ಕಳು, ಉಷಾರಾಗಿಯೇ ತಮ್ಮ ಗೂಡಿಗೆ ಹಿಂದಿರುಗಿರುತ್ತವೆ" ಎಂದೆ.

"ಎಲ್ಲ ಹೆಣ್ಣು ಮಕ್ಕಳು?"

"ಹೌದು ಮಗಳೆ ಇರುವೆಗಳ ಗೂಡಿನಲ್ಲಿ ಕೆಲಸ ಮಾಡುವ ಎಲ್ಲ ಇರುವೆಗಳೂ ಅಕ್ಕ ತಂಗಿಯರು. ತಮ್ಮ ರಾಣಿ ತಾಯಿಯನ್ನು ಮೊಟ್ಟೆ ಇಡುವಂತೆ ಪ್ರೇರೇಪಿಸಿ, ಆ ಮೊಟ್ಟೆಗಳಿಂದ ಬರುವ ಸೋದರಿಯರನ್ನು ಪೋಷಿಸಿ ಸಾಕುತ್ತವೆ. ಅವೆಲ್ಲವೂ ಮತ್ತೆ ತಮ್ಮ ಹಿರಿಯ ಸೋದರಿಯರಂತೆಯೇ ಕೆಲಸ ಮಾಡುತ್ತವೆ. ತಾವು ಪುನರಾಭಿವೃದ್ಧಿ ಮಾಡದೆ ಹಾಗೆಯೇ ಗೂಡಿನ ಸೇವೆಯಲ್ಲಿ ತೊಡಗುತ್ತವೆ. ಅವುಗಳಲ್ಲಿ ಕೆಲವು ಹೊರಗೆ ಹೋಗಿ ಆಹಾರ ತರುವವರು, ಕೆಲವರು ಗೂಡಿನಲ್ಲಿಯೇ ಎಲ್ಲ ವ್ಯವಹಾರವನ್ನೂ ನೋಡಿಕೊಳ್ಳುವ ದೊಡ್ಡಕ್ಕಂದಿರು, ಇನ್ನು ಕೆಲವು ಹೆಣ್ಣು ಮಕ್ಕಳು ಸೈನಿಕರಂತೆ ಗೂಡನ್ನು ಕಾಯುವವರು. ಮತ್ತೆ ಕೆಲವರು ಎಂಜಿನಿಯರುಗಳಂತೆ ತಮ್ಮ ಗೂಡಿನ ನಗರವನ್ನು ಕಟ್ಟುವವರು?. ಹೀಗೆ."

"ಗೂಡಿನ ನಗರ?"

"ಹೌದು.. ಸಾಮಾನ್ಯವಾಗಿ ಪ್ರತಿ ಇರುವೆ ಗೂಡು ಭೂಗರ್ಭದಲ್ಲಿ ನಿರ್ಮಾಣವಾಗುವ ದೊಡ್ಡ ಒಂದು ವಸತಿ ಸಂಕೀರ್ಣ ಎನ್ನಬಹುದು– ಮಲ್ಟಿಫ್ಲೋರ್ಡ್ ಫ್ಲಾಟ್ ಗಳು ಇದ್ದ ಹಾಗೆ. ಹಲವಾರು ಅಂತಸ್ತುಗಳಲ್ಲಿ ಈ ವಸತಿ ಸಂಕೀರ್ಣವನ್ನು ಕಟ್ಟುತ್ತವೆ . ಪ್ರತಿ ಅಂತಸ್ಥಿನಲ್ಲೂ ಹಲವಾರು ಭಾಗಗಳು ಪ್ರತಿ ಭಾಗದಲ್ಲೂ ಹಲವು ಕೊಟಡಿಗಳು.. ಹೀಗೆ? ಪ್ರತಿ ಗೂಡಿನಲ್ಲಿ ಕೆಲವೊಮ್ಮೆ ನೂರಾರು, ಸಾವಿರಾರು ಇರುವೆಗಳಿರುತ್ತವೆ. ಕೆಲವು ಪ್ರಭೇದಗಳಲ್ಲಂತೂ ಲಕ್ಷಾಂತರ ಇರುವೆಗಳಿರುತ್ತವೆ. ಅವೆಲ್ಲಕ್ಕೂ ಆ ವಸತಿ ಸಂಕೀರ್ಣದಲ್ಲಿ ಸ್ಥಳವಿರುತ್ತದೆ. "

ಒಂದು ಇರುವೆ ಗೂಡಿನ ಒಳ ರಚನೆ. ಇಲ್ಲಿ ಹಲವಾರು ಅಂತಸ್ತುಗಳಲ್ಲಿ ನಿರ್ಮಿಸಲಾಗಿರುವ ಗೃಹ ಸಂಕೀರ್ಣ ಮತ್ತು ಅವುಗಳ ನಡುವಿನ ಸಂಪರ್ಕಮಾರ್ಗಗಳನ್ನು ಕಾಣಬಹುದು. (ಮೂಲ: https://cdn.thewire.in/wp-content/uploads/2021/09/14212644/Image-4-Field-Museum-2012-Badland-1-scaled.jpg)

"ಅಷ್ಟು ದೊಡ್ಡ ಜನಜಂಗುಳಿಯಲ್ಲಿ ಅವುಗಳ ನಡುವೆ ಹೇಗೆ ತಾನೆ ವಿಷಯಗಳ ಸಂವಹನ, ಸಂಘಟನೆ, ಇಡೀ ಗುಂಪಿನ ಮೇಲ್ವಿಚಾರಣೆ ಸಾಧ್ಯ ಅಪ್ಪಾಜಿ?"

ಅವಳ ಪ್ರಶ್ನೆಗೆ ನನ್ನಲ್ಲಿ ಸಿದ್ದ ಹಾಗೂ ಸಂಪೂರ್ಣ ಉತ್ತರ ಇರಲಿಲ್ಲ. ಕಾರಣ, ಲಕ್ಷಾಂತರ ಇರುವೆಗಳ ನಡುವೆ ಸಂಪರ್ಕ, ಸಂವಹನ ಮತ್ತು ಸಂವೇದನೆ ಹೇಗೆ ನಡೆಯುತ್ತದೆ ಎಂಬ ಬಗ್ಗೆ ಹಲವಾರು ಅಧ್ಯಯನಗಳು ನಡೆದಿದ್ದರೂ ಇನ್ನೂ ಸಂಪೂರ್ಣವಾಗಿ ಎಲ್ಲವನ್ನೂ ತಿಳಿಯಲಾಗಿಲ್ಲ. ಹಾಗೆಂದೆ ಪುಣ್ಯಗೆ ಅವಳ ಟಾಯ್ಲೆಟ್ ನಲ್ಲಿ ನಮ್ಮ ತಂದೆಯ ಸಿಹಿಮೂತ್ರಕ್ಕೆ ಆಕರ್ಷಿತಗೊಂಡ ಇರುವೆಗಳು ನಮ್ಮ ಪ್ರಪಂಚವನ್ನು ಹೇಗೆ ಗ್ರಹಿಸಿರಬಹುದು ಎನ್ನುವ ಹಾಗೂ ತಮ್ಮ ಅನುಭವವನ್ನು ತಮ್ಮ ಗೂಡಿನಲ್ಲಿ ಹೇಗೆ ಹೇಳಿರಬಹುದು ಎಂಬ ಪ್ರಶ್ನೆಗಳಿಗೆ ನನ್ನ ಊಹೆಯಲ್ಲಿ ಮೂಡಿದ ಚಿತ್ರಣವೇ ಈ ಕತೆಯ ಮೊದಲನೆ ಭಾಗ.

(ಸ್ಪಷ್ಟತೆಗಾಗಿ ಓದುಗರು ಆ ಭಾಗವನ್ನು ಮತ್ತೆ ಓದಿದರೆ ಉತ್ತಮ. )

*ಪ್ರೊ. ಕೆ. ಎನ್. ಗಣೇಶಯ್ಯ ಅಂತಾರಾಷ್ಟ್ರೀಯ ಖ್ಯಾತಿಯ ಕೀಟವಿಜ್ಞಾನಿಗಳು. ವಿಜ್ಞಾನ ಸಂವಹನಕಾರರು ಹಾಗೂ ವೈಜ್ಞಾನಿಕ ಕಥೆಗಾರರು. ಇದು ಕುತೂಹಲಿಯ ಓದುಗರಿಗಾಗಿ ಅವರ ಹೊಸ ಪ್ರಯತ್ನ.*

*ಸೂಚನೆ: ವಿಜ್ಞಾನದ ವಿಷಯಗಳನ್ನು ಮಕ್ಕಳಿಗೆ ವಿವರಿಸಲು, ಪೋಷಕರು ಕಥೆಯ ರೂಪದಲ್ಲಿ ಅವರೊಂದಿಗೆ ಓದಿ, ಚರ್ಚಿಸಿ, ಅವರಲ್ಲಿ ಆಸಕ್ತಿ ಹುಟ್ಟಿಸಲು ಸಾಧ್ಯವೆ ಎಂದು ಯೋಚಿಸುತ್ತಿರುವಾಗ ಮೂಡಿದ ಒಂದು ಮಾದರಿ ಅಥವ ರೂಪವೇ ಈ ಕಿರುಗಥೆ. ಹಾಗಾಗಿ ಇದು ಮಕ್ಕಳು ತಾವಾಗಿ ಓದಿ ತಿಳಿಯುವ ಕಥೆಯಲ್ಲ. ಬದಲಿಗೆ ಪೋಷಕರು ಮಕ್ಕಳೊಂದಿಗೆ ಓದಿ, ವಿವರಿಸಿ, ಅದರ ಮೂಲಕ ಅವರಿಗೆ ಇರುವೆಗಳ ಸಹಬಾಳ್ವೆಯ ಬಗ್ಗೆ ವಿವರಗಳನ್ನು ನೀಡುವ ಉದ್ದೇಶದಿಂದ ಮೂಡಿದ ಕಥೆ ಇದು.*

# ಆಕಾಶ ನಕ್ಷೆ

## ಜುಲೈ 2022

ಜುಲೈ 2022 ತಿಂಗಳ ಖಗೋಳ ವಿದ್ಯಮಾನಗಳು :

### ಆಕಾಶನಕ್ಷೆ ಬಳಸುವ ವಿಧಾನ

ಆಗಸದತ್ತ ದೃಷ್ಟಿ ನೆಟ್ಟು, ನಿಮ್ಮ ಕಣ್ಣೆದುರು ನಕಾಶೆಯನ್ನು ಹಿಡಿಯಿರಿ. ನಕ್ಷೆಯಲ್ಲಿ ತೋರಿಸಿರುವ ದಿಕ್ಕುಗಳನ್ನು, ನಮ್ಮ ಭೂಮಿಯ ದಿಕ್ಕುಗಳಿಗೆ ಸರಿಹೊಂದಿಸಿ. ಈಗ ನಕ್ಷೆಯಲ್ಲಿ ತೋರಿಸಿರುವ ನಕ್ಷತ್ರಪುಂಜಗಳನ್ನು, ಗ್ರಹಗಳನ್ನು ಹಾಗೂ ನಕ್ಷತ್ರಗಳನ್ನು ಆಗಸದಲ್ಲಿ ಗುರುತಿಸಲು ಪ್ರಯತ್ನಿಸಿ.

ಉತ್ತರ
ಕ್ಯಾಸಿಯೋಪಿಯಾ
ಪೊಲಾರಿಸ್ (ಧ್ರುವ ನಕ್ಷತ್ರ)
ಉರ್ಸಾ ಮೈನರ್
ಸೀಫಸ್
ಉರ್ಸಾ ಮೇಜರ್ (ಸಪ್ತರ್ಷಿ ಮಂಡಲ)
ಮೈಜರ್ ಮತ್ತು ಅಲ್ಕಾರ್ (ವಸಿಷ್ಠ ಮತ್ತು ಅರುಂಧತಿ ನಕ್ಷತ್ರ)
ಆಂಡ್ರೊಮಿಡಾ
ಡ್ರಾಕೊ
ಡನೆಬ್ (ನಕ್ಷತ್ರ)
ವೇಗಾ (ನಕ್ಷತ್ರ)
ಲೈರಾ
ಸಿಗ್ನಸ್
ಪೆಗಾಸಸ್
ಬೋಟಿಸ್
ಹರ್ಕ್ಯುಲಸ್
ಕೊರೊನ ಬೋರಿಯಾಲಿಸ್
ಆಲ್ಬಿರಿಯೊ (ನಕ್ಷತ್ರ)
ಆರ್ಕ್ಟುರಸ್ (ನಕ್ಷತ್ರ)
ಪೂರ್ವ
ಪಶ್ಚಿಮ
ಡೆಲ್ಫಿನಸ್
ಸ್ಯಾಗಿಟಾ
ಪೈಸಿಸ್ (ಮೀನ)
ಅಲ್ಟೇರ್ (ನಕ್ಷತ್ರ)
ಅಕ್ವಿಲಾ
ಅಕ್ವಾರಿಸ್ (ಕುಂಭ)
ಆಫಿಯುಕಸ್
ವರ್ಗೋ (ಕನ್ಯಾ)
ಸ್ಯಾಟರ್ನ್ (ಶನಿಗ್ರಹ)
Saturn
ಲಿಬ್ರಾ (ತುಲಾ)
ಸ್ಪೈಕಾ (ಚಿತ್ತ ನಕ್ಷತ್ರ)
ಕ್ಯಾಪ್ರಿಕಾರ್ನಸ್ (ಮಕರ)
ಕೊರ್ವಸ್
ಅಂಟರಿಸ್ (ನಕ್ಷತ್ರ)
ಹೈಡ್ರಾ
ಸ್ಯಾಗಿಟಾರಿಯಸ್ (ಧನು)
ಸ್ಕೊರ್ಪಿಯಸ್ (ವೃಶ್ಚಿಕ)
ಪೈಸಿಸ್ ಆಸ್ಟ್ರಿನಸ್
ಕೊರೋನ ಆಸ್ಟ್ರಾಲಿಸ್
ಗ್ರಸ್
ಲ್ಯೂಪಸ್
ಸೆಂಟಾರಸ್
ಅರಾ
ಪಾವೋ
ರೈಜಿಲ್ ಕೆಂಟಾರಸ್ (ನಕ್ಷತ್ರ)
ಟ್ರೈಯಾಂಗ್ಯುಲಮ್ ಆಸ್ಟ್ರಾಲೇ
ದಕ್ಷಿಣ

ಸ್ಥಳ : ಬೆಂಗಳೂರು, 13.0000°N, 77.0000°E
ಸಮಯ : **20 ಜುಲೈ 2022,** 22:30 (UTC +05:30)

**ಜುಲೈ 04**

ಭೂಮಿಯು ಸೂರ್ಯನ ಸುತ್ತ ದೀರ್ಘವೃತ್ತಾಕಾರದ ಕಕ್ಷೆಯಲ್ಲಿ ಸುತ್ತುತ್ತದೆನ್ನುವುದು ಎಲ್ಲರಿಗು ತಿಳಿದಿದೆಯಷ್ಟೆ. ಹಾಗೆ ಸುತ್ತುವಾಗ ಭೂಮಿಯು ಒಂದು ಬಿಂದುವಿನಲ್ಲಿ (ಪುರ ರವಿ ಬಿಂದು – Perihelion) ಸೂರ್ಯನಿಗೆ ಅತಿ ಸಮೀಪದಲ್ಲಿರುತ್ತದೆ. ಹಾಗೂ ಇನ್ನೊಂದು ಬಿಂದುವಿನಲ್ಲಿ(ಅಪ ರವಿ ಬಿಂದು – Aphelion) ಸೂರ್ಯನಿಂದ ಅತಿ ದೂರದಲ್ಲಿರುತ್ತದೆ. ಈ ದಿನ ಭೂಮಿಯು ಸೂರ್ಯನಿಂದ ಅತಿ ದೂರದಲ್ಲಿರುತ್ತದೆ.

**ಜುಲೈ 13**

ಈ ದಿನ ಹುಣ್ಣಿಮೆ. ಈ ಸಮಯದಲ್ಲಿ ಅಮೇರಿಕಾದಲ್ಲಿ ಗಂಡು ಜಿಂಕೆಗಳು ತಮ್ಮ ಹೊಸ ಕೊಂಬುಗಳನ್ನು ಬೆಳೆಸಿಕೊಳ್ಳಲು ಪ್ರಾರಂಭಿಸುವುದರಿಂದ, ಅಲ್ಲಿಯ ಪುರಾತನ ಮೂಲನಿವಾಸಿಗಳು ಈ ಹುಣ್ಣಿಮೆಯನ್ನು 'ಚಿಗರೆ ಚಂದ್ರ' ಎಂದು ಕರೆದರು. 2022ರ ಸೂಪರ್ ಮೂನ್ ಗಳಲ್ಲಿ ಇದು ಎರಡನೆಯದು.

**ಜುಲೈ 28**

ಈ ದಿನ ಅಮಾವಾಸ್ಯೆ. ಚಂದ್ರನ ಬೆಳಕಿಲ್ಲದ ಕಾರಣ, ಭೂಮಿಯಿಂದ ದುರ್ಬಲವಾಗಿ ಕಾಣುವ ನಕ್ಷತ್ರಪುಂಜಗಳು, ಗ್ಯಾಲಕ್ಸಿಗಳಂತಹ ಆಕಾಶಕಾಯಗಳನ್ನು ವೀಕ್ಷಿಸಲು ಈ ಸಮಯ ತುಂಬಾ ಪ್ರಶಸ್ತವಾಗಿದೆ.

**ಜುಲೈ 28 – 29**

ಕುಂಭ ರಾಶಿಯಿಂದ ಹೊರಟಂತೆ ಕಾಣುವ, 'ಡೆಲ್ಟಾ ಅಕ್ವಾರಿಡ್ಸ್ ಉಲ್ಕಾ ವರ್ಷ'ವು ಜುಲೈ 28ರ ಮಧ್ಯರಾತ್ರಿಯ ನಂತರ, ಜುಲೈ 29ರ ಮುಂಜಾನೆಯವರೆಗೆ ಉಚ್ಛ್ರಾಯ ಸ್ಥಿತಿಯಲ್ಲಿರುತ್ತದೆ. ಈ ಸಮಯದಲ್ಲಿ ಗಂಟೆಗೆ ಸುಮಾರು 20 ಉಲ್ಕೆಗಳ ಪತನವನ್ನು ನೋಡಬಹುದು. 'ಮಾರ್ಸ್ಡೆನ್ ಹಾಗೂ ಕ್ರಾಚ್' ಎಂಬ ಧೂಮಕೇತುಗಳು ಬಾಹ್ಯಾಕಾಶದಲ್ಲಿ ಎರಚಿ ಹೋದ ಪಳೆಯುಳಿಕೆಗಳು ಈ ಉಲ್ಕಾವರ್ಷದ ಮೂಲಧಾತುಗಳು. ಇಂದು ಅಮಾವಾಸ್ಯೆಯ ದಿನವಾದ ಕಾರಣ, ಕಾರ್ಗತ್ತಲ ರಾತ್ರಿಯಲ್ಲಿ ಆಗಸದಲ್ಲಿ ಚುಕ್ಕಿಗಳ ಮಳೆಯನ್ನುನೋಡಿ ಆನಂದಿಸಬಹುದು. ಆದರೆ ಮೇಘರಾಜನ ಕೃಪೆಯಿರಬೇಕಷ್ಟೆ.

● ವೇಣುಗೋಪಾಲ ಗಾಂವಕರ್



(ವಿ. ಸೂ. : ಈ ಆಕಾಶ ನಕ್ಷೆಯನ್ನು ಡೌನ್ಲೋಡ್ ಮಾಡಿಕೊಂಡು ಉಪಯೋಗಿಸಲು, ಇದರೊಂದಿಗೆ ಕೊಟ್ಟಿರುವ ಅನ್ನು ಸ್ಕ್ಯಾನ್ ಮಾಡಿ. ರಾತ್ರಿಯಾಗಸವನ್ನು ವೀಕ್ಷಿಸುವಾಗ, ಬೆಳಕಿಗೆ, ಕೆಂಪು ಬಣ್ಣದ ದೀಪಗಳನ್ನು ಬಳಸುವುದು ಒಳ್ಳೆಯದು. ಈ ನಕ್ಷೆಯನ್ನು ಬೆಂಗಳೂರಿನ ಸ್ಥಾನಕ್ಕೆ ಅನುಗುಣವಾಗಿ ತಯಾರಿಸಿದ್ದರೂ, ಅತ್ಯಲ್ಪ ಬದಲಾವಣೆಗಳನ್ನು ಗಣನೆಗೆ ತೆಗೆದುಕೊಂಡು, ಬೇರೆ ಸ್ಥಾನಗಳಲ್ಲೂ ಬಳಸಬಹುದು.)

ಕ್ಯಾಸಿಯಾ ಆಕ್ಸಿಡೆಂಟಾಲಿಸ್ ಗಿಡದ ವಿಷದಿಂದಾಗುವ ಜ್ವರ ಹಾಗೂ ಅದರ ಪರಿಣಾಮಗಳಿಗೆ ಚಿಕಿತ್ಸೆ ಏನು?

ಡಾ. ವಿನೀತ್ ವಶಿಷ್ಠ ಅವರ ವೈದ್ಯಕೀಯ ಪತ್ತೇದಾರಿಯ ಮುಂದುವರೆದ ಭಾಗ

# ಪತ್ತೇದಾರರಾದ ವೈದ್ಯರು

ಭಾಗ –3

ಇದುವರೆಗೆ ಮುಜಫ್ಫರ್ ಪುರದ ಸುತ್ತಮುತ್ತಲೂ ಕೇವಲ ಬಡ ಮಕ್ಕಳನ್ನಷ್ಟೆ ಕಾಡುವ ವಿಚಿತ್ರ ಜ್ವರ ಹರಡಿತ್ತು. ಮೊದಲಿಗೆ ಇದು ವೈರಸ್ಸಿನಿಂದಾಗುವ ಮಿದುಳು ಜ್ವರದಂತೆ ಕಂಡರೂ, ಹಲವು ರೋಗಲಕ್ಷಣಗಳು ಅದಲ್ಲ ಎಂದಿದ್ದುವು. ಇದರ ಬೆನ್ನು ಹತ್ತಿದ ವೈದ್ಯರಿಗೆ ಅದೊಂದು ಸಾಮಾನ್ಯವಾದ, ಪರಿಚಿತ ಗಿಡವೊಂದರ ಬೀಜಗಳಲ್ಲಿನ ವಿಷದಿಂದ ಆಯಿತೆನ್ನುವ ಸಂಗತಿ ತಿಳಿಯಿತು. ಕ್ಯಾಸಿಯಾ ಆಕ್ಸಿಡೆಂಟಾಲಿಸ್ ಎನ್ನುವ ಕಳೆಗಿಡದ ಬೀಜಗಳನ್ನು ಅರೆ ಹೊಟ್ಟೆಯಲ್ಲಿ ತಿಂದ ಬಡ ಮಕ್ಕಳನ್ನಷ್ಟೆ ಈ ಖಾಯಿಲೆ ತಾಕುತ್ತಿತ್ತು. ಈ ವಿಷ ಯಾವುದು? ಅದಕ್ಕೆ ಪ್ರತಿವಿಷ ಸಿಗಬಹುದೇ ಎನ್ನುವ ಪ್ರಶ್ನೆಗಳೊಂದಿಗೆ ವೈದ್ಯರ ಪತ್ತೇದಾರಿಕೆ ಮುಂದುವರೆಯಿತು.

ಮುಕುಲ್ ದಾಸ್ ತಂಡದವರು ಈ ಕ್ಯಾಸಿಯಾ ವಿಷ ಲೀವರನ್ನು ಹೇಗೆ ಹಾಳುಗೆಡವುತ್ತದೆ ಎನ್ನುವುದನ್ನು ಇಲಿಗಳಲ್ಲಿ ಅಧ್ಯಯನ ಮಾಡಿದರು. ಇವರ ಫಲಿತಾಂಶಗಳ ಪ್ರಕಾರ ಆಹಾರದಲ್ಲಿ ಶೇಕಡ 0.5 ರಷ್ಟು ಬೀಜಗಳಿದ್ದರೂ ಇಲಿಗಳ ಲೀವರಿನಲ್ಲಿ ಜರುಗುವ ಹಲವು ಜೈವಿಕ ಕ್ರಿಯೆಗಳಿಗೆ ಬಾಧೆ ಬರುತ್ತಿತ್ತೆಂದು ಮುಕುಲ್ ದಾಸರ ತಂಡ ಪತ್ತೆ ಮಾಡಿತು.

ಮುಂದಿನ ಹೆಜ್ಜೆ, ಕ್ಯಾಸಿಯಾ ಗಿಡದ ಬೀಜಗಳನ್ನು ಸೇವಿಸಿದ ರೋಗಿಗಳಲ್ಲಿ ಹಾಗೂ ಇಲಿಗಳಲ್ಲಿ ಅದರಲ್ಲಿರುವ ವಿಷವಸ್ತು ಇದೆಯೇ ಎಂದು ಗುರುತಿಸುವುದು. ಕ್ಯಾಸಿಯಾ ಆಕ್ಸಿಡೆಂಟಾಲಿಸಿನ ಬೀಜಗಳನ್ನು ಅರೆದು ತೆಗೆದ ರಸವನ್ನು ಗ್ಯಾಸ್ ಕ್ರೊಮಾಟೊಗ್ರಫಿ–ಮಾಸ್ ಸ್ಪೆಕ್ಟ್ರೋಗ್ರಾಫ್ ತಂತ್ರ ಬಳಸಿ ಅಧ್ಯಯನ ಮಾಡಿದರು. ಈ ತಂತ್ರ ರಸದಲ್ಲಿರುವ ಯಾವುದೇ ವಸ್ತುವಿನ ರಚನೆ ಹಾಗೂ ಅದರ ಅಣುವಿನ ಗಾತ್ರವನ್ನು ತಿಳಿಸುತ್ತದೆ. ಈ ಅಧ್ಯಯನಗಳು ಫಿಸಿಯಾನ್, ರೀಯಿನ್,ಇಮೋಡಿನ್, ಆಲೋ–ಇಮೋಡಿನ್ ಮತ್ತು ಕ್ರೈಸೊಫೇನಾಲ್ ಎನ್ನುವ ಐದು ಆಂತ್ರಾಕ್ವಿನೋನು ವರ್ಗಕ್ಕೆ ಸೇರಿದ ರಾಸಾಯನಿಕಗಳು ದೇಹದಲ್ಲಿವೆ ಎಂದು ತೋರಿಸಿದವು.

ವಿಶೇಷ ಎಂದರೆ ಈ ಎಲ್ಲ ಆಂತ್ರಾಕ್ವಿನೋನು ರಾಸಾಯನಿಕಗಳೂ ರೋಗಿಗಳ ಹಾಗೂ ಬೀಜಗಳನ್ನು ಸೇವಿಸಿದ್ದ ಇಲಿಗಳ ಮೂತ್ರ ಮತ್ತು ರಕ್ತಸಾರ (ಸೀರಮ್)ದಲ್ಲಿ ಇದ್ದುವು. ಇವುಗಳಲ್ಲಿ ರೀಯಿನ್ ಎನ್ನುವುದು ಅತ್ಯಂತ ವಿಷಕಾರಿ ಎಂದು ತಿಳಿಯಿತು. ಇಮೋಡಿನ್, ಆಲೋ–ಇಮೋಡಿನ್, ಫಿಸಿಯಾನ್ ಮತ್ತು ಕ್ರೈಸೊಫೇನಾಲುಗಳು ಅದಕ್ಕಿಂತಲೂ ಕಡಿಮೆ ವಿಷಗುಣದವಾಗಿದ್ದುವು. ಅಂತೂ ನಾವು ಮಕ್ಕಳ ಲೀವರುಗಳಿಗೆ ಹಾನಿ ಮಾಡಿ, ಸಾವುಂಟು ಮಾಡುತ್ತಿದ್ದ ಪ್ರಮುಖ ವಿಷವಸ್ತುವನ್ನು ಗುರುತಿಸಿದೆವು. ಅದೇ ರೀಯಿನ್ ಆಂತ್ರಾಕ್ವಿನೋನು.

ಈ ರೀಯಿನ್ ಅಣುವಿನಿಂದ ದೇಹದ ರೋಗ ಪ್ರತಿರೋಧದ ಮೇಲಾಗುವ ಪರಿಣಾಮಗಳು ಹಾಗೂ ಅದು ಡಿಎನ್ಎ ಮತ್ತು ಗ್ಲುಟಾಥಯೋನ್ ಅಣುಗಳ ಜೊತೆಗೆ ಅದರ ಕ್ರಿಯೆಗಳೇನೇನು ಎಂದು ತಿಳಿಯಲು ಮುಕುಲ್ ದಾಸ್ ತಂಡ ಪ್ರಯೋಗಗಳನ್ನು ನಡೆಸಿತು. (ಲೀವರಿನ ಜೀವಕೋಶಗಳ ಮರಣಕ್ಕೆ ಡಿಎನ್ಎಯಲ್ಲಿ ಆಗುವ ಹಾನಿ ಹಾಗೂ ಈ ಹಾನಿಯನ್ನು ತಡೆಗಟ್ಟುವ ವಸ್ತುಗಳಲ್ಲಿ ಗ್ಲುಟಾಥಯೋನ್ ಪ್ರಮುಖ ವಸ್ತು. ) ಇಲಿಗಳ ಮೇಲೆ ಅವರು ನಡೆಸಿದ ಪ್ರಯೋಗಗಳು



ಕ್ಯಾಸಿಯಾ ಆಕ್ಸಿಡೆಂಟಾಲಿಸಿನ ಬೀಜಗಳ ಸೇವನೆಯಿಂದ ಮನುಷ್ಯರ ರೋಗನಿರೋಧಕ ಸಾಮರ್ಥ್ಯದ ಮೇಲಾಗುವ ಪರಿಣಾಮಗಳನ್ನು ಅರ್ಥ ಮಾಡಿಕೊಳ್ಳಲು ನೆರವಾದುವು. ಒಟ್ಟಾರೆ, ಇವೆಲ್ಲ ಪ್ರಯೋಗಗಳೂ, ರೀಯಿನ್, ಇಮೋಡಿನ್ ಹಾಗೂ ಆಲೋ-ಇಮೋಡಿನ್‌ಗಳ ವಿಷ ಪರಿಣಾಮಗಳಿಗೆ ಅವು ಡಿಎನ್ಎ ಅಣುಗಳು ಹಾಗೂ ಗ್ಲುಟಾಥಯೋನ್ ಜೊತೆಗೆ ತಳುಕಿಕೊಳ್ಳುವುದು ಮೂಲವೆಂದು ತಿಳಿಸಿದುವು.

ಹಾಂ. ನಮ್ಮ ಪತ್ತೇದಾರಿಕೆ ಇಲ್ಲಿಗೇ ಮುಗಿಯಲಿಲ್ಲ. ಡಾ. ಮುಕುಲ್ ದಾಸ್ ಇನ್ನೂ ಒಂದು ಹೆಜ್ಜೆ ಮುಂದೆ ನಡೆದು, ಈ ಆಂತ್ರಾಕ್ವಿನೋನ್ ವಿಷಗಳಿಗೆ ಪ್ರತಿವಿಷವಾಗುವಂಥ ರಾಸಾಯನಿಕವನ್ನೂ ಹುಡುಕಿದರು. ಅದು ರೋಗಪ್ರತಿರೋಧವನ್ನು ಮಾರ್ಪಡಿಸುವ ಸೈಕ್ಲೊಸ್ಪೋರಿನ್-ಎ ಎನ್ನುವ ಔಷಧ. ಕೇವಲ ನೂರು ನ್ಯಾನೋ ಮೋಲ್ ಅಂದರೆ ಅದರ ಅಣು ತೂಕದ ಕೋಟಿಯಲ್ಲೊಂದು ಅಂಶದಷ್ಟು ಪ್ರಮಾಣದಲ್ಲಿದ್ದರೂ ಸೈಕ್ಲೊಸ್ಪೋರಿನ್-ಎ ಲೀವರಿನ ಜೀವಕೋಶಗಳ ಸಾವನ್ನು ತಡೆಯುತ್ತಿತ್ತು. ಹೀಗೆ ಈ ವಿಷಗಳ ಪರಿಣಾಮ, ಫಲಗಳ ಬಗ್ಗೆ ಏಳು ಸಂಶೋಧನಾ ಪ್ರಬಂಧಗಳನ್ನು ಪ್ರತಿಷ್ಠಿತ ಪತ್ರಿಕೆಗಳಲ್ಲಿ ಮುಕುಲ್ ದಾಸ್ ಪ್ರಕಟಿಸಿದರು. (pubmed.ncbi.nlm.nih.gov/25915446/)

ನಮ್ಮ ದುರಾದೃಷ್ಟ, ಅಥವಾ ಅದೃಷ್ಟವೆನ್ನಿ. ಈ ಔಷಧವನ್ನು ಬಳಸುವ ಪ್ರಮೇಯ ನಮಗೆ ಒದಗಲೇ ಇಲ್ಲ. ಏಕೆಂದರೆ ಈ ಪ್ರತಿವಿಷವನ್ನು ಗುರುತಿಸುವಷ್ಟರಲ್ಲಿ ರೋಗ ಹೆಚ್ಚೂ ಕಡಿಮೆ ಮಾಯವಾಗಿಬಿಟ್ಟಿತ್ತು. ಹೀಗೆ ನಮ್ಮ ತಂಡ ಮತ್ತೆ ಮತ್ತೆ ಮರಳುತ್ತಿದ್ದ ಈ ನಿಗೂಢ ಮಾರಕ ಖಾಯಿಲೆಯ ರಹಸ್ಯವನ್ನು ಬೇಧಿಸಿತಷ್ಟೆ ಅಲ್ಲ, ಜನರಲ್ಲಿ ವ್ಯಾಪಕವಾಗಿ ಜಾಗೃತಿಯನ್ನು ಮೂಡಿಸುವ ಮೂಲಕ ಅದನ್ನು ನಿಯಂತ್ರಿಸಿತು. ಜೊತೆಗೇ ಹೆಚ್ಚೂ ಕಡಿಮೆ ಮಾರಕವಾದ ಈ ವಿಷ ಸೇವನೆಗೆ ಔಷಧವನ್ನೂ ಪತ್ತೆ ಮಾಡಿತು.

ಮಾರಕ ಖಾಯಿಲೆಯನ್ನು ಗೆದ್ದ ಖುಷಿಯನ್ನು ನಾವು ಮಾರ್ಚ್ 2011ರಲ್ಲಿ ಸಹರನಪುರದಲ್ಲಿ ಒಂದು ಸಭೆಯ ರೂಪದಲ್ಲಿ ಆಚರಿಸಿದೆವು. ಈ ಸಭೆಯನ್ನು ಭಾರತೀಯ ಶಿಶುವೈದ್ಯರ ಸಂಘ, ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿ, ಶಿಶು ಆರೋಗ್ಯ ಪ್ರತಿಷ್ಠಾನಗಳು ಆಯೋಜಿಸಿದ್ದುವು. ನಮ್ಮ ಈ ಅಧ್ಯಯನ ಭಾರತದಲ್ಲಿ ಹೊಸ ರೋಗಗಳ ಅನ್ವೇಷಣೆಯ ಹಾದಿಯಲ್ಲಿ ಒಂದು ಮೈಲುಗಲ್ಲೆನಿಸಿತು. ಇಂತಹ ಅಧ್ಯಯನಗಳನ್ನು ಕೈಗೊಳ್ಳುವ ಹಾದಿಯನ್ನೂ, ಇವುಗಳ ಬಗ್ಗೆ ನಮಗಿರುವ ನಂಬಿಕೆಯನ್ನೂ ಆಮೂಲಾಗ್ರವಾಗಿ ಬದಲಾಯಿಸಿತು. ಭಾರತದಲ್ಲಿದ್ದ ವಿಶ್ವ ಆರೋಗ್ಯ ಸಂಸ್ಥೆಯ ಸಮುದಾಯ ಸ್ವಾಸ್ಥ್ಯ ತರಬೇತಿ ಕಾರ್ಯಕ್ರಮಗಳು ಅಪರಿಚಿತ ಖಾಯಿಲೆಗಳ ಅನ್ವೇಷಣೆಯ ಬಗ್ಗೆ ನಮ್ಮ ಈ ಅಧ್ಯಯನಗಳನ್ನು ಆಧರಿಸಿದ ಕೈಪಿಡಿಯೊಂದನ್ನು ಸಿದ್ಧಪಡಿಸಿ, ಕ್ಷೇತ್ರಾಧ್ಯಯನದಲ್ಲಿ ತೊಡಗಿಕೊಂಡ ಯುವಕರಿಗೆ ತರಬೇತಿ ನೀಡಲು ಆರಂಭಿಸಿತು.

ನಮ್ಮ ಸಂಶೋಧನೆಗಳ ಪ್ರಮುಖ ಫಲಿತಾಂಶಗಳು ಆ ಹಿಂದೆ ನಿಗೂಢವೆನಿಸಿದ್ದ ಕೆಲವು ಖಾಯಿಲೆಗಳನ್ನೂ


ಕ್ಯಾಸಿಯಾ ಆಕ್ಸಿಡೆಂಟಾಲಿಸ್

**ನಮ್ಮ ದುರಾದೃಷ್ಟ, ಅಥವಾ ಅದೃಷ್ಟವೆನ್ನಿ. ಈ ಔಷಧವನ್ನು ಬಳಸುವ ಪ್ರಮೇಯ ನಮಗೆ ಒದಗಲೇ ಇಲ್ಲ. ಏಕೆಂದರೆ ಈ ಪ್ರತಿವಿಷವನ್ನು ಗುರುತಿಸುವಷ್ಟರಲ್ಲಿ ರೋಗ ಹೆಚ್ಚೂ ಕಡಿಮೆ ಮಾಯವಾಗಿಬಿಟ್ಟಿತ್ತು. ಹೀಗೆ ನಮ್ಮ ತಂಡ ಮತ್ತೆ ಮತ್ತೆ ಮರಳುತ್ತಿದ್ದ ಈ ನಿಗೂಢ ಮಾರಕ ಖಾಯಿಲೆಯ ರಹಸ್ಯವನ್ನು ಬೇಧಿಸಿತಷ್ಟೆ ಅಲ್ಲ, ಜನರಲ್ಲಿ ವ್ಯಾಪಕವಾಗಿ ಜಾಗೃತಿಯನ್ನು ಮೂಡಿಸುವ ಮೂಲಕ ಅದನ್ನು ನಿಯಂತ್ರಿಸಿತು.**

ವಿವರಿಸಿದವು. 1954ರಲ್ಲಿ ಡಾ. ನಜೀಬ್ ಖಾನ್ ಎಂಬಾತ ಜಮಷೆಡ್ಪುರದ ಜ್ವರ ಎಂಬ ಖಾಯಿಲೆಯನ್ನು ಪತ್ತೆ ಮಾಡಿದ್ದು ನಿಮ್ಮಲ್ಲಿ ಎಷ್ಟು ಜನರಿಗೆ ನೆನಪಿದೆಯೋ ಗೊತ್ತಿಲ್ಲ. ಅಥವಾ 1950ರ ದಶಕದಲ್ಲಿ ಕಾಣಿಸಿದ್ದ ನಾಗಪುರ ಮಿದುಳು ಜ್ವರದ ಬಗ್ಗೆ ಗೊತ್ತಿರಬೇಕಲ್ಲ? ಹೀಗೆ ಮಕ್ಕಳ ಮಿದುಳಿನ ಚಟುವಟಿಕೆಗಳನ್ನು ಬಾಧಿಸುವ ಜ್ವರವನ್ನು ಸಾಮಾನ್ಯವಾಗಿ ಮಿದುಳು ಜ್ವರ ಎಂದು ಆರೋಗ್ಯ ಸಿಬ್ಬಂದಿಗಳು ಕರೆದುಬಿಡುತ್ತಿದ್ದರು. ಅದನ್ನು ಇನ್ನಷ್ಟು ವಿಶದವಾಗಿ ಗುರುತಿಸಲು ಪ್ರಯತ್ನಿಸುತ್ತಿರಲಿಲ್ಲ. ಇಂತಹ ಮಿದುಳುಜ್ವರ ವ್ಯಾಪಕವಾಗಿ ಕಾಣಿಸಿಕೊಂಡಾಗಲೆಲ್ಲ, ಅದು ವೈರಸ್ಸಿನಿಂದಾಗಿರಬೇಕು ಎಂದು ತರ್ಕಿಸಲಾಗುತ್ತಿತ್ತು. 1955ರಲ್ಲಿಯೇ ಭಾರತದಲ್ಲಿ ಹೀಗೆ ಮಿದುಳುಜ್ವರವನ್ನು ಗುರುತಿಸಿದ್ದರು ಎನ್ನುವುದು ನೆನಪಿರಲಿ.

ಒಂದೇ ತೆರನಾದ ಮಿದುಳು ಜ್ವರದ ಖಾಯಿಲೆಗಳು ಭಾರತದ ವಿಭಿನ್ನ ಪ್ರದೇಶಗಳಲ್ಲಿ ಆಗಾಗ್ಗೆ ಕಾಣಿಸಿಕೊಂಡಿದ್ದುಂಟು. ಇವುಗಳಲ್ಲಿ ಬಹುತೇಕದವನ್ನು ಸರಿಯಾಗಿ ದಾಖಲಿಸಿಲ್ಲ. ಪಂಜಾಬ್, ಹರ್ಯಾಣಾ, ಉತ್ತರಪ್ರದೇಶ ಮತ್ತು ಬಿಹಾರದಲ್ಲಿ 1950 ನೇ ದಶಕದ ನಡು ಭಾಗದಲ್ಲಿ ಹಲವೆಡೆ ಮಿದುಳುಜ್ವರ ಕಾಣಿಸಿಕೊಂಡಿತ್ತು ಎಂದು ಆಸ್ಪತ್ರೆಯ ದಾಖಲೆಗಳು ತಿಳಿಸುತ್ತವೆ. 1983ರಿಂದ 1986ರ ಅವಧಿಯಲ್ಲಿ ಬೆಂಗಳೂರಿನಲ್ಲಿಯೂ ಮಕ್ಕಳಲ್ಲಿ ರೇಯೆ ಖಾಯಿಲೆ ಸಾಂಕ್ರಾಮಿಕವೆನ್ನುವಂತೆ ಹರಡಿತ್ತು. 1997ರಲ್ಲಿ ಹರ್ಯಾಣಾದ ಹಲವು ಜಿಲ್ಲೆಗಳಲ್ಲಿ ಹಾಗೂ ಚಂಡೀಗಢದ ಆಸುಪಾಸಿನ ಪ್ರದೇಶಗಳ ಮಕ್ಕಳಲ್ಲಿ ಮಿದುಳುಜ್ವರ ಹರಡಿತ್ತು. ಇವೆಲ್ಲವನ್ನೂ ರೇಯೆ ಖಾಯಿಲೆ ಎಂದೇ ಪರಿಗಣಿಸಿಬಿಟ್ಟಿದ್ದರು. ಆದರೆ ರೇಯೆ ಖಾಯಿಲೆ ಹೀಗೆ ಸಾಂಕ್ರಾಮಿಕವೆನ್ನುವಂತೆ ಕಾಣಿಸಬಹುದೋ? ಖಂಡಿತ ಇಲ್ಲ. ಇವುಗಳಲ್ಲಿ ಬಹುತೇಕವು ವಿಷವಸ್ತುವಿನಿಂದಾಗಿ ಉಂಟಾದ ಮಿದುಳಿನ ಖಾಯಿಲೆಗಳು. ಬಹುಶಃ ಇವುಗಳಲ್ಲಿ ಹಲವು ಘಟನೆಗಳಿಗೆ ಕ್ಯಾಸಿಯಾ ಬೀಜಗಳೂ ಕಾರಣವಿದ್ದಿರಬಹುದು. ಈಗ ರೇಯೆ ಖಾಯಿಲೆ ಎಂದು ಹೊಸ ಮಿದುಳು ಜ್ವರಗಳನ್ನು ಇಷ್ಟು ಸುಲಭವಾಗಿ ಹೆಸರಿಸಲಾಗದು. ಅದನ್ನು ನಿರೂಪಿಸಲು ಶ್ರಮಿಸಬೇಕಾಗುತ್ತದೆ.

2007ನೇ ಇಸವಿಯಲ್ಲಿ ಬಾಂಗ್ಲಾದೇಶದಲ್ಲಿ ಇದೇ ಬಗೆಯಲ್ಲಿ ಕಾಣಿಸಿದ ಮಿದುಳುಜ್ವರವನ್ನು ಉಂಟು ಮಾಡಿದ ವಿಷವನ್ನು ಪತ್ತೆ ಮಾಡಿದ್ದು ನಮ್ಮ ಸಂಶೋಧನೆಗಳ ಆಧಾರದಿಂದ. ಇದನ್ನು ಅನ್ವೇಷಿಸಿದ ಸಂಶೋಧಕರು ನಮ್ಮ ಅಧ್ಯಯನಗಳನ್ನು ಉಲ್ಲೇಖಿಸಿದ್ದರು. ಈ ಖಾಯಿಲೆಯು ಘಾಗ್ರಾ ಶಾಕ್ (ಮರಳುಮತ್ತಿ) ಎನ್ನುವ ಗಿಡದ ವಿಷ ಸೇವನೆಯಿಂದ ಆಗಿತ್ತು ಎಂದು ಗುರುತಿಸಲಾಯಿತು. ಮಲ್ಕಾನ್ ಗಿರಿ ಪ್ರದೇಶದಲ್ಲಿ ವ್ಯಾಪಕವಾಗಿ ಕಂಡು ಬಂದ ಇಂತಹುದೇ ಇನ್ನೊಂದು ಖಾಯಿಲೆಯು ಕ್ಯಾಸಿಯಾ ಜಾತಿಯ ಇನ್ನೊಂದು ಗಿಡ (ಬಡಾ ಚಕುಂದಾ) ಎನ್ನುವುದರ ಸೇವನೆಯಿಂದಾಗಿತ್ತೆಂದು ತಿಳಿಯಿತು. ಇದರ ಪತ್ತೆಯಾದ ಕೆಲವೇ ಗಂಟೆಗಳಲ್ಲಿ ಕಾರಣವೇನೆಂದು ಡಾ. ಟಿಜೆ ಜಾರ್ಜ್ ಗುರುತಿಸಿ ಬಿಟ್ಟರು. ಇದಾದ ನಂತರ ಒಂದರ ಬೆನ್ನಲ್ಲಿ ಇನ್ನೊಂದರಂತೆ ಮುಜಫ್ಫರ್ ಪುರದಲ್ಲಿ ಮಿದುಳು ಜ್ವರದ ಪೀಡೆ ಕಾಣಿಸಿತು (2012-19).




ಸಹಾರನಪುರದಲ್ಲಿ ಕ್ಯಾಸಿಯಾಗೆ ಸಂಬಂಧಿಸಿದ ವಿಷ ಪರಿಣಾಮದ ಬಗ್ಗೆ ಕೆಲಸ ಮಾಡಿದ ಅನುಭವದ ಹಿನ್ನೆಲೆಯಲ್ಲಿ ಇದು ಇನ್ನೊಂದು ವಿಷ ಸೇವನೆಯ ಪರಿಣಾಮವೆನ್ನುವುದು ನಮಗೆ ಖಚಿತವಾಗಿತ್ತು. ಜೂನ್ 2021ರಲ್ಲಿ ನಾವು ಈ ಬಗ್ಗೆ ಈ ಮೇಲುಗಳ ಮುಖಾಂತರ ನಮ್ಮ ಚಿಂತನೆಗಳನ್ನು ಹಂಚಿಕೊಂಡು, ಈ ಪೀಡೆಗೆ ಕಾರಣವೇನೆಂಬುದನ್ನು ಗುರುತಿಸಿದೆವು. ಜೂನ್ 24, 2012ರಂದು ನಾನು ನಮ್ಮ ಗುಂಪಿನ ಸದಸ್ಯರು ಹಾಗೂ ಭಾರತೀಯ ಶಿಶುವೈದ್ಯರ ಸಂಘದ ಸದಸ್ಯರಿಗೆ ಒಂದು ಈ ಮೇಲಿನಲ್ಲಿ ಇದರಲ್ಲಿ ಲಿಚೀ ಹಣ್ಣಿನ ಪಾತ್ರವಿರಬಹುದೆಂದು ಸೂಚಿಸಿ ಪತ್ರ ಬರೆದೆ. ಅನಂತರ ಡಾ. ಟಿಜೆ ಜಾರ್ಜ್ ಮತ್ತು ಮುಕುಲ್ ದಾಸ್ ಈ ಹೈಪೋಗ್ಲೈಸೀಮಿಕ್ ಎಂಕೆಫಲೋಪತಿ (ರಕ್ತದಲ್ಲಿನ ಸಕ್ಕರೆಯ ಪ್ರಮಾಣವನ್ನು ಕುಗ್ಗಿಸುವ ಮಿದುಳುಜ್ವರ) ಖಾಯಿಲೆಗೆ ಲಿಚೀ ಹಣ್ಣಿನಲ್ಲಿನ ವಿಷವೇ ಮುಖ್ಯ ಕಾರಣವೆಂದು ನಿರೂಪಿಸಿದರು. ನಾನು ಈ ತಂಡದಲ್ಲಿ ಪಾಲ್ಗೊಳ್ಳಲಾಗಲಿಲ್ಲ. ಆದರೆ ಡಾ. ಟಿ.ಜೆ. ಜಾರ್ಜ್ ಇದನ್ನು ಮುನ್ನಡೆಸಿದರು. ಅವರೊಟ್ಟಿಗೆ ಕೈ ಜೋಡಿಸಿದ ಡಾ. ಅರುಣ್ ಶಾ ಅಲ್ಲಿ ಈ ಪೀಡೆ ಹರಡದಂತೆ ತಡೆಯುವುದರಲ್ಲಿ ಶಕ್ತರಾದರು. ಇಲ್ಲಿ ನಾನು ಕೆಲವು ಘಟನೆಗಳನ್ನಷ್ಟೆ ಉಲ್ಲೇಖಿಸಿದ್ದೇನೆ.

ಇವೆಲ್ಲದರಲ್ಲಿಯೂ ನಾವು ಕಲಿತ ದೊಡ್ಡ ಪಾಠವೊಂದಿದೆ. ಚರ್ವಿತ ಚರ್ವಣ ವಲ್ಲದ ಕಾರಣಗಳನ್ನು ಹುಡುಕುವುದು. ಶೋಧ ಕಾರ್ಯದಲ್ಲಿ ತಿಳಿ ಮನಸ್ಸಿನಿಂದ, ಯಾವುದೇ ಪೂರ್ವಾಗ್ರಹವಿಲ್ಲದೆ ಮುಕ್ತ ಮನಸ್ಸಿನಿಂದ ಆಲೋಚಿಸಬೇಕು ಎನ್ನುವುದು. ಒಂದೇ ಮಾಹಿತಿಯನ್ನು ಈ ಬಗೆಯಲ್ಲಿ ಬೇರೆಯದೇ ದೃಷ್ಟಿಕೋನದಿಂದ ನೋಡಿದಾಗ ಕಾಣುವ ವಿನ್ಯಾಸವೇ ನಾವು ಪಲ್ಲಟಿಸುವ ಘಟನೆ ಎನ್ನುವ ದೃಶ್ಯ.

ಅಂದರೆ ಅರ್ಥ ಇಷ್ಟೆ. ಇರುವ ಮಾಹಿತಿಯನ್ನೇ ಹೊಸ ದೃಷ್ಟಿಕೋನದಿಂದ ಗಮನಿಸಿ. ಇನ್ನೊಂದು ದೃಷ್ಟಿಕೋನವಿದ್ದರೆ ಅದನ್ನು ನಿರ್ಲಕ್ಷಿಸಬೇಕಿಲ್ಲ. "ಇದು ಹಾಗೆ ಇರಲಿಕ್ಕಿಲ್ಲ?" ಎಂದು ಬಿಸಾಡುವ ಮೊದಲು ಆ ಇನ್ನೊಬ್ಬನ ದೃಷ್ಟಿಕೋನದಿಂದ ಗಮನಿಸಲು ಪ್ರಯತ್ನಿಸಿ. ಯಾರಿಗೆ ಗೊತ್ತು. ನೀವು ಮೊಟ್ಟೆ ಎಂದು ಕೊಂಡದ್ದು ಮೊಲವೇ ಆಗಿರಬಹುದು.

ನಾನು ಖಿನ್ನನಾದಾಗಲೆಲ್ಲ ಈ ವಿಷಯಗಳನ್ನು ನೆನಪಿಸಿಕೊಳ್ಳುತ್ತೇನೆ. ನಿಗೂಢವೆನ್ನಿಸಿದ ಈ ರೋಗಗಳಿಗೆ ಕಾರಣಗಳನ್ನು ಪತ್ತೆ ಮಾಡುವುದಕ್ಕೆಂದು ನಾವು ಕಳೆದ ಸಮಯ ನೆನಪಾಗುತ್ತದೆ. ಇದು ನನ್ನೊಬ್ಬನ ಕಥೆಯಲ್ಲ. ನಮ್ಮೆಲ್ಲರ ಭಾವನೆಗಳೂ ಈ ದಿಸೆಯಲ್ಲಿ ಒಂದೇ ಎನ್ನಬಹುದು.

*ಡಾ. ವಿನೀತ್ ವಶಿಷ್ಠ ವೈದ್ಯಕೀಯ ಸಂಶೋಧಕರು. ಶಿಶು ರೋಗ ತಜ್ಞರು. ಇದು ವಶಿಷ್ಠ ಅವರ ಟ್ವಿಟ್ಟರ್ ಸಂದೇಶಮಾಲೆಯನ್ನು ಆಧರಿಸಿದ ಲೇಖನ. ಪ್ರಸ್ತುತಿ: ಕೊಳ್ಳೇಗಾಲ ಶರ್ಮ*

# ವಿಜ್ಞಾನದ ಸಾಮಾಜಿಕ ಜವಾಬುದಾರಿ ಹೇಗೆ ಪೂರೈಸೋಣ?

3ನೇ ಪುಟದಿಂದ ➤

ಜಟಿಲವಾದ ವಿಷಯವನ್ನು ಜನಸಾಮಾನ್ಯರಿಗೂ ಅರಿವು ಮೂಡುವಂತೆ ವ್ಯಾಪಕವಾಗಿ ಅರ್ಥೈಸುವುದರಲ್ಲಿ ವಿಜ್ಞಾನಿಗಳಿಗೆ ತರಬೇತಿ ನೀಡಬೇಕಾಗಿದೆ.

ಭಾಷೆಗಳ ಬೇಲಿಯು ಅಡ್ಡಿಯಾಗದಂತೆ ಎಲ್ಲ ಮಾಹಿತಿಯನ್ನೂ ಭಾರತೀಯ ಭಾಷೆಗಳಲ್ಲಿಯೂ ಸಿದ್ಧಪಡಿಸಬೇಕಾಗಿದೆ. ವಿಜ್ಞಾನ ಮತ್ತು ತಂತ್ರಜ್ಞಾನದ ಸಂವಹನ, ಜನಪ್ರಿಯ ವಿಜ್ಞಾನ ಹಾಗೂ ವಿಜ್ಞಾನ ವಿಸ್ತರಣೆಗೆ ಹಲವು ಸವಾಲುಗಳು ಎದುರಾಗುತ್ತವೆ. ಇವುಗಳನ್ನು ಸಮರ್ಥವಾಗಿ ನಿಭಾಯಿಸಲು ನಮಗೆ ವಿಜ್ಞಾನ ಸಂವಹನಕಾರರ ಅವಶ್ಯಕತೆ ಬಹಳವಿದೆ. ಮುದ್ರಣ, ಇಲೆಕ್ಟ್ರಾನಿಕ್, ಸಾಮಾಜಿಕ ಹಾಗೂ ಡಿಜಿಟಲ್ ಮಾಧ್ಯಮಗಳ ಮೂಲಕ ತರಬೇತಿಯನ್ನು ನೀಡಿ ಇಂತಹ ಸಂವಹನಕಾರರನ್ನು ರೂಪಿಸಬೇಕಾಗಿದೆ. ನಿಯತವಾದ ತರಬೇತಿಯನ್ನು ನೀಡುವುದಲ್ಲದೆ, ವಿಜ್ಞಾನ ಸಂವಹನ, ಜನಪ್ರಿಯ ವಿಜ್ಞಾನ ಹಾಗೂ ವಿಸ್ತರಣೆಯ ಕ್ಷೇತ್ರದಲ್ಲಿ (ಸ್ಕೋಪ್) ಹೊಸ ಉದ್ಯೋಗಗಳನ್ನೂ ಸೃಷ್ಟಿಸಬೇಕಿದೆ. ಇದಕ್ಕಾಗಿ ಪ್ರತಿಯೊಂದು ವಿಜ್ಞಾನ ಮತ್ತು ತಂತ್ರಜ್ಞಾನದ ಸಂಸ್ಥೆಯೂ ಕೂಡ ಒಬ್ಬನಾದರೂ ಸ್ಕೋಪ್ ತಜ್ಞನನ್ನು ನೇಮಿಸಿಕೊಳ್ಳಬೇಕು. ಹೀಗಾದಲ್ಲಿ ಈ ಕ್ಷೇತ್ರದಲ್ಲಿಯೂ ಉದ್ಯೋಗಾವಕಾಶಗಳು ಸೃಷ್ಟಿಯಾಗಬಲ್ಲುವು.

ಕಳೆದ ಹಲವು ವರ್ಷಗಳಿಂದ ವಿಜ್ಞಾನ ಪ್ರಸಾರ್ ಆಕಾಶವಾಣಿಯಲ್ಲಿ ವಿವಿಧ ವಿಷಯಗಳನ್ನು ಕುರಿತು ಐವತ್ತೆರಡು ಸಂಚಿಕೆಗಳ ವಿಜ್ಞಾನ ಕಾರ್ಯಕ್ರಮಗಳನ್ನು ಪ್ರಸಾರ ಮಾಡುತ್ತಲಿದೆ."ಇತ್ತೀಚೆಗಷ್ಟೆ ಆರ್ಟಿಫಿಶಿಯಲ್ ಇಂಟೆಲಿಜೆನ್ಸ್ ಕುರಿತ "ಭವಿಷ್ಯದ ಬೆರಗು" ಎನ್ನುವ ಸರಣಿಯ ಪ್ರಸಾರ ಕೊನೆಗೊಂಡಿತು. ಹತ್ತೊಂಭತ್ತು ಭಾರತೀಯ ಭಾಷೆಗಳಲ್ಲಿ ಏಕಕಾಲಕ್ಕೆ ಸಿದ್ಧಪಡಿಸಿದ ಈ ಕಾರ್ಯಕ್ರಮವನ್ನು ಡಜನ್ನಿಗೂ ಮೀರಿದ ಎಫ್‌ಎಂ ಚಾನೆಲ್ಲುಗಳು, 120 ಮೀಡಿಯಮ್ ವೇವ್ ನಿಲಯಗಳು ಪ್ರಸಾರ ಮಾಡಿದ್ದುವು. ವಿಜ್ಞಾನ ಮತ್ತು ತಂತ್ರಜ್ಞಾನದ ನೆರವಿನಿಂದ ಆತ್ಮನಿರ್ಭರತೆಯನ್ನು ಸಾಧಿಸುವ ಕುರಿತು ಇನ್ನೊಂದು ಸರಣಿ ಆರಂಭವಾಗಲಿದೆ. ಕೇಳಲು ಸಿದ್ಧರಾಗಿರಿ.



ಚಿತ್ರ: ಸುಷ್ಮಾ ಶಾಲೀನಿ

# ನಂಬರ್ ಗೇಮ್

**ನೀರು ಕೊಳ್ಳಲು ನಂಬರ್ ಒನ್ನಿನ ಕಿಡ್ನಿಯೇ ಬೇಕೆ? ಅವಳಿಗಿಂತ ವಯಸ್ಸಾದವರೂ ಇದ್ದಾರಲ್ಲ?**

**ಸಪ್ನಾ ಕಟ್ಟಿ**

**ಕಲ್ಪನೆ ಕಥೆ**

ನಂಬರ್ ಒನ್ ಕಣ್ಣು ಕೆಳಗೆ ತಿರುಗಿಸಿ ತೊಡೆಯ ಮೇಲಿಟ್ಟುಕೊಂಡಿದ್ದ ಕೈಯನ್ನೇ ದಿಟ್ಟಿಸಿದಳು. ಉಗುರುಗಳು ಬೆಳೆದು ನೈಲ್ ಪಾಲಿಶ್ ಮೇಲೇರುತ್ತಾ ಹೋಗಿ ಸಣ್ಣ ಅರ್ಧ ಚಂದ್ರಾಕಾರದಷ್ಟು ಮಾತ್ರ ಉಳಕೊಂಡಿತ್ತು. ಆರು ತಿಂಗಳ ಕೆಳಗೆ ಮರಿಮಗಳ ಲಗ್ನಕ್ಕೆ ಹಚ್ಚಿಕೊಂಡದ್ದಲ್ಲವೆ? ದುಃಖ ಉಮ್ಮಳಿಸಿ ಬಂತು. 'ಎಷ್ಟು ಖುಷಿಯಾಗಿದ್ದೆ ನಾನು! ಏನು ಹಾಡು ಕುಣಿತಗಳು, ಖೀರು ಸಂಡಿಗೆಗಳ ಭರ್ಜರಿ ಊಟವೇನು! ಎಲ್ಲಾ ನೆಂಟರ ಭೇಟಿ; ಸ್ವರ್ಗ ಕಂಡ ಹಾಗಿತ್ತು. ಆದರೆ ಆಗಾಗ ಒಂಥರಾ ಸೊಟ್ಟಾಗುತ್ತಿದ್ದ ಸೊಸೆ ಹೀರಾಳ ತುಟಿಗಳಿಂದ ಇಂಥಾ ಭೀಕರ ಸುದ್ದಿ ಹೊರಬೀಳ್ತದೆಂದು ನನಗೇನು ಗೊತ್ತಿತ್ತು?' ಮತ್ತೆ ಕೈ ನೋಡಿಕೊಂಡರು.

ಮೊದಲೇ ಗಿಡ್ಡಾಕಾರದ ಲಟ್ಟಣಿಗೆಯಂಥಾ ಕೈಗಳ ಮೇಲಿದ್ದ ಚಿಕ್ಕ ಬೆರಳುಗಳು ಈಗಂತೂ ಸೇಂಗಾಬೀಜದಷ್ಟಾಗಿದ್ದವು.

'ಅಲ್ಲ ನೂರಾ ನಾಲ್ಕು ವರ್ಷ ಬದುಕಿದ್ದೇನು ತಮ್ಮ ತಪ್ಪೇ?' ಬಿಕ್ಕಿದರು.

'ಖಂಡಿತ ಹೌದು' ಯಾರೋ ಮೆಲ್ಲನೆ ಉಸುರಿದಂತೆ ಭಾಸ. "ಬೇಡಾ ತನು ಎಂಬತ್ತರಲ್ಲಿ ಈ ಗುಳಿಗೆ ಇಂಜೆಕ್ಷನ್‌ಗಳ ಗೊಡವೆ. ಮರಣಕ್ಕೆ ಏನಾದರೂ ದಾರಿ ತಂತಾನೇ ತೆರಕೋಬೇಕು ಕಣೆ. ಹಾಗೇ ದೇಹವನ್ನೆದೆಷ್ಟು ಪೋಷಿಸ್ತೀಯಾ?" ಸ್ನಾಯುಗಳ ಬಿಗಿತಕ್ಕಾಗಿ ತಾ ತೆಕ್ಕೊಳ್ಳುತ್ತಿದ್ದ ಗುಳಿಗೆಗಳ ಬಾಟಲಿಯನ್ನು ಕಸಿಯುತ್ತಾ ಪತಿ ಅವಿನಾಶ ಹೇಳಿದ ಮಾತು ಕಿವಿಯಲ್ಲಿ ಗುಂಯಗುಟ್ಟಿತು. ತಮ್ಮ ಹೆಸರು ತನು, ತನುಜಾ ಅಗ್ರವಾಲ ಅಂತ ಅವರಿಗೆ ಮರೆತೇ ಹೋಗಿದೆ. ಈ "ಕಾಯ ಕುಬ್ಜ ಕೇಂದ್ರ"ಕ್ಕೆ ಬಂದ ಹೊಸತರಲ್ಲಿ ನಂಬರಿನ ಬ್ಯಾಡ್ಜೊಂದನ್ನು ಕೊರಳಿಗೆ ಹಾಕಿದಾಗ ಬಲು ಕಿರಿಕಿರಿಯೆನಿಸಿತ್ತು. ಆದರೆ ಬರ್ತಾ ಬರ್ತಾ ಹೆಸರಿಗಿಂತ ನಂಬರೇ ಹಿತವೆನ್ನಿಸತೊಡಗಿತ್ತು.

ಕಿವಿಗೆ ಸಿಕ್ಕಿಸಿದ್ದ ಯಂತ್ರದ ಬಳಿ ದೈತ್ಯಾಕಾರವೊಂದು ಬಂದು ನಿಂತು ಒದರಿದಂತಾಯ್ತು. ಏನೂ ಕೇಳದಿದ್ದರೂ ಅವಳು ಹಾಕ್ಕೊಂಡಿದ್ದ ಪರಫ್ಯೂಮಿನಿಂದಲೇ ಗೊತ್ತಾಯ್ತು ನರ್ಸ್ ಲಿಂಡಾ ಅಂತ.

"ಲಿಂಡಾ ನನಗೆ ನಾಷ್ಟಾ ಬೇಕು ಗುಳಿಗೆ ಬೇಡ" ಅರಚಿದಳು ನಂಬರ್ ಒನ್. ಆದರೆ ಲಿಂಡಾಳ ಮುಖ ನಿರ್ಭಾವುಕವಾಗಿತ್ತು. ಅವಳಿಗೆ ಧ್ವನಿ





ಕೇಳಿದ್ದರೆ ತಾನೆ? ತರಂಗಾಂತರ! ನಂಬರ್ ಒನ್ ಳ ಮಾತಿನ ಫ್ರೀಕ್ವೆನ್ಸಿ ಕೇವಲ ಕೇಂದ್ರದ ಇತರ ಸದಸ್ಯೆಯರ ಕಿವಿಗಳಿಗೆ ಮಾತ್ರ ಹೊಂದುತ್ತದೆ, ಸಾಮಾನ್ಯ ಮನುಷ್ಯರದಕ್ಕಲ್ಲ. ಲಿಂಡಾಳ ಕಿವಿ ಮುಟ್ಟದ ಅಶಕ್ತ ಧ್ವನಿ ಮರಳಿ ತನಗೇ ಅಪ್ಪಳಿಸಿದಂತೆ ನಂಬರ್ ಒನ್ ನಡುಗಿದಳು.

ಮತ್ತಾವುದೋ ಬೇರೆ ತರಂಗಗಳ ಸ್ಪರ್ಶ ದೇಹಕ್ಕೆ; ಮತ್ತೊಬ್ಬ ಸದಸ್ಯೆ ಬಂದಂತಿದೆ. ಅವಳು ಸಮೀಪ ಬರುತ್ತಿದ್ದಂತೆ ಫ್ರೀಕ್ವೆನ್ಸಿ ಗುರುತಿಸಿದ ನಂಬರ್ ಒನ್ ಳ ಕೈಯಲ್ಲಿದ್ದ ವಾಚಿನಂತಹ ಪುಟ್ಟ ಯಂತ್ರ ಸಂಖ್ಯೆ ತೋರಿಸಿತು.

ಓ ನಂಬರ್ ಸಿಕ್ಸ್ ಬರ್ತಿದ್ದಾಳೆ.

“ಇದೊಂದು ಯಂತ್ರ ಕೊಟ್ಟು ಎಂಥಾ ಉಪಕಾರ ಮಾಡಿದೆ ಈ ಎಂಜೆಲ್ ಎನ ಜಿ ಓ. ಮೇಲಿನಂತೆ ಇಲ್ಲಿ ನಮಗೆ ಹೆಸರಿಲ್ಲದ್ದರೇನಾಯ್ತು? ಈ ಸಾಧನ ಉಂಟಲ್ಲ. ಕೇವಲ ಗುಂಡಿಗಳನ್ನದುಮಿ ಸ್ತ್ರೀ ಸಂಘಗಳಿಗೆ, ಮೇಲಿನಧಿಕಾರಿಗಳಿಗೆ, ಎನ್ ಜಿ ಓ ಸದಸ್ಯರಿಗೆ, ಬೇಕೆಂದರೆ ಮನೆ ಮಂದಿಗೆ ಕೂಡಾ ನಮ್ಮ ಮಾತು ಮುಟ್ಟಿಸಬಹುದು. ಎಂದೂ ನಮ್ಮಿಂದಾಗದೇ ಇದ್ದ ಕೆಲಸ ಈಗ ಆಗುತ್ತಿದೆ ವಾವ್!” ಖುಷಿಯಲ್ಲಿ ನಂಬರ್ ಒನ್ ಆ ಡಯಲಗೇ ಮುತ್ತಿಡಲು ಹೋದಳು. ಆದರೆ ನೇರ ಕಟ್ಟಿಗೆಯಂಥಾ ಬೆನ್ನುಹುರಿ ಮುಷ್ಕರ ಹೂಡಿದಾಗ ಬರಿದೇ ಫ್ಲೈಯಿಂಗ್ ಮುತ್ತು ಕೊಟ್ಟಳದಕ್ಕೆ.

ನರ್ಸ್ ಕುರ್ಚಿಯ ಮೇಲೆತ್ತಿ ಕೂಡಿಸುತ್ತಿದ್ದಂತೆ ಕುರ್ಚಿಯ ಕಾಲುಗಳಿಗಿಂತ ಎರಡು ಫೂಟನೆತ್ತರದಲ್ಲಿ ಜೋತಾಡಿದ ಚಿಕ್ಕ ಬಟಾಟೆಯಷ್ಟಿದ್ದ ತನ್ನ ಬೂಟುಗಳನ್ನು ಕೊಡವುವಂತೆ ಜಾಡಿಸಿದಳು ನಂಬರ್ ಸಿಕ್ಸ್.

“ಇವಕ್ಕೆ ಮೀಟಿಂಗ್ ಬೇರೆ ಕೇಡು!” ತನ್ನ ಮಾತು ಅವರಿಗೆ ಕೇಳುವುದಿಲ್ಲವೆಂದು ಗೊತ್ತಿದ್ದೂ ಲಿಂಡಾ ಗೊಣಗಿದಳು. ಆದರೂ ಅವಳು ಹೇಳಬೇಕೆಂಬ ಮಾತು ಯಾವಾಗಲೂ ನಂಬರ್ ಸಿಕ್ಸ್ ಗೆ ತಿಳಿದೇ ತಿಳಿಯುತ್ತದೆ. ಒರಟು ಸ್ಪರ್ಶ ತಿಳಿಸದ ಮಾತ್ಯಾವುದಿದೆ? ಅಲ್ಲದೆ ಭುಜ ಹಿಡಿದು ಝುಲ್ಲಿಸುವುದು, ಸೋಟೆ ತಿವಿಯುವುದು ಇತ್ಯಾದಿ ಅವಳಿಗೆ ಹೊಸದೇನೂ ಅಲ್ಲವಲ್ಲ. ಕೃತಕ ಮೋಡ ಮಾರಲು ನಾಗಾ ಕಾರ್ಪೊರೇಶನ್ ನ ಮಂದಿ ಬಂದಾಗ “ಈ ಬಾರಿ ಸಾವಿರ ಕೆ ಜಿ ನೀರಿಗೆ ಬದಲಿಯಾಗಿ ಕಿಡ್ನಿ ಮಾರಲಾರೆ” ಅಂತ ಮುಖಕ್ಕೆ ರಾಚಿದಂತೆ ಅವಳು ಹೇಳಿಬಿಟ್ಟಾಗಿನಿಂದ ಪೂರಾ ಮನೆಯವರೆಲ್ಲ ಇದೇ ತರಹ ಭುಜ ಹಿಡಿದು ಅಲುಗಿಸಿದ್ದರು. ಜೊತೆಗೆ ಬುಡಕಟ್ಟಿನವರೂ ಕೂಡಾ. ‘ಲಿವರನ ತುಸು ಭಾಗ ಹೋದ ವರ್ಷವಷ್ಟೇ ಕೊಟ್ಟಿದ್ದೇನೆ. ಆ ಸರಪಂಚಿಣಿ ಕಾಯಾ ಏನು ಚಿಕ್ಕವಳೆ? ತೊಂಬತ್ತೆಂಟು ವರ್ಷ; ಅಂದರೆ ನನಗಿಂತ ಮೂರೇ ವರ್ಷಕ್ಕೆ ಚಿಕ್ಕವಳು. ಅವಳೇಕೆ ಕಿಡ್ನಿ ಕೊಡಬಾರದಿತ್ತು? ಪೂರಾ ವಸತಿಗೆಲ್ಲಾ ನಾನೇ ನೀರು ಕೊಡಿಸುತ್ತೇನೆ ಅಂತ ಬರೆದುಕೊಟ್ಟಿದ್ದೇನೆಯೆ? ಹೋಗಲಿ ನೀರು ಕೊಡಿಸಿದ್ದೇನೆ ಅಂತ ಇವರೇನು ನನಗೆ ಒಂದು ಹೊತ್ತಾದರೂ ಹೆಚ್ಚಿನ ಚಪಾತಿ ಕೊಟ್ಟರೆ? ನೀವು ಊಟ ಕೊಡೋದೇ ಬೇಡ. ನಾನೇ ಬಿತ್ತಿ ಬೆಳಕೊಂಡು ಉಣ್ತೇನೆ ಅಂದರೆ ಒಂಚೂರು ನೆಲ, ಕಡೆಗೆ ಒಂದಿಷ್ಟು ಕೃತಕ ಕೆರೆಯ ಮೇಲ್ಮೈ; ಏನೆಂದರೆ ಏನೂ ಕೊಡಲಿಲ್ಲ. ಈಗ ನನ್ನ ದೇಹದ ಮೇಲೆಯೂ ನನಗೆ ಹಕ್ಕಿಲ್ಲ ಅಂತಾರಲ್ಲ ಈ ಮಂದಿ!’ ನಂಬರ ಸಿಕ್ಸ್ ಳ ವಿಚಾರಸರಣಿಯಂತೆಯೇ ಅವಳ ರಕ್ತವೂ ಕೊತಕೊತ ಕುದಿಯಿತು.

ಅಂತೂ ಸ್ವಂತ ಇಚ್ಛೆಯಿಂದ ಇಲ್ಲಿ ಬಂದು ಸೇರಿಕೊಂಡವಳೆಂದರೆ ನಂಬರ ಸಿಕ್ಸ್ ಒಬ್ಬಳೇ. ರಾಸಾಯನಿಕಳನ್ನು ಚುಚ್ಚಿ ದೇಹ ಕುಬ್ಜ ಮಾಡಿದರೇನಾಯ್ತು? ಹಸಿವೇ ಇಂಗಿ ಹೋಗುವಂತೆ ಕರುಳು ಜಠರಗಳನ್ನು ಮಾರ್ಪಾಡು ಮಾಡಿದರೇನಾಯ್ತು? ಕಾಯಂ ಆಗಿ ಈ ನೆಲೆಮನೆಯ ಪ್ರಯೋಗಾಲಯದಲ್ಲಿಯೇ ಇದ್ದರೆ ತಾನೆ ಏನಾಯ್ತು? ತನ್ನದು ಅಂತ ಹೇಳ್ಕೊಳ್ಳುವ ದೇಹ ಇದೆಯಲ್ಲ ಸಾಕು. ಮೆಲ್ಲನೆ ನಕ್ಕಳು ನಂಬರ್ ಸಿಕ್ಸ್.

“ಓಕೆ ಏನೇನು ಮಾತಾಡುವುದೆಂದು ಪಾಯಿಂಟ್ ಹಾಕ್ಕೊಂಡಿದ್ದೀಯಲ್ಲವೆ?”

“ಓಹೋ. ಇನ್ನುಳಿದ ಸದಸ್ಯೆಯರದೇ ಹಾದಿ”

“ಇನ್ನೇನು ಬಂದಾರು”

ನಂಬರ್ ಸೆವೆನ್ ಳ ಧಢೂತಿ ಆಕಾರ ಕೋಣೆಯೊಳಗೆ ಬರುತ್ತಿದ್ದಂತೆ ನರ್ಸ ದೊಡ್ಡ ಕುರ್ಚಿಯೊಂದನ್ನು ಜೋರಾಗಿ ಅವಳತ್ತ ನೂಕಿದಳು. “ನರ್ಸ್ ಸ್ವಲ್ಪ ಹುಷಾರು ಕುರ್ಚಿ ಅಪ್ಪಳಿಸಬೇಡ, ಅವಳು ನಂಬರ್ ಸೆವೆನ್ ಗೊತ್ತಿದೆ ತಾನೆ? ನಿನ್ನ ಮೂರು ಪಟ್ಟು ಶಕ್ತಿ ಅವಳಿಗಿದೆ. ಅಲ್ಲದೆ ಅವಳ ವಸತಿಯಿನ್ನೂ ಮೇಲಿನ ಜಗತ್ತಿನಲ್ಲೇ ಇದೆ ಅಂತ ನೆನಪಿರಲಿ.” ಲಿಂಡಾ ತನಗೆ ಬಂದ ನಂಬರ್ ಒನ್ ಳ ಸಂದೇಶ ನೋಡಿದೊಡನೆಯೇ ತಿರಸ್ಕಾರದ ನಗು ನಕ್ಕು ಡಿಲೀಟ್ ಮಾಡಿದಳು. ‘ಇನ್ನು ಇವಕ್ಕೆ ಹೆದರಿ ನಾನಿರಬೇಕಾ?’ ಅಂತ ಗೊಣಗಿಗೊಂಡಳು.

ದೇಹದ ಆಕಾರ ಹೆಚ್ಚಿಸಲು ಹತ್ತಾರು ಆಪರೇಶನ್ ಗಳನ್ನು ಮಾಡಿ ನಂಬರ್ ಸೆವೆನ್ ಳ ಮೂಳೆಗಳನ್ನು ಹೀಚಲಾಗಿದೆ, ಜೋಡಣೆಗಳನ್ನು ಬಿಚ್ಚಿ ಕಟ್ಟಲಾಗಿದೆ. ಸ್ನಾಯುಗಳ ಮಧ್ಯೆ ಕೂರಿಸಿದ ಎಂಥದೋ ನ್ಯಾನೋ ಯಂತ್ರಗಳು ಏನೇನೋ ಆಟ ಆಡಿ ಆದ ಗಾಯ ಮಾಯಿಸುತ್ತಿವೆ. ಆದರಿನ್ನೂ ಪೂರ್ತಿಯಾಗಿ ಅವು ಮಾಯ್ದಿಲ್ಲ. ನೋವೇ ತಿಳಿಯದಿರಲು ಕೊಟ್ಟ ರಾಸಾಯನಿಕಗಳು ಅವಳ ಮಿದುಳಿನ ಮೇಲೆ ಅತಿ ಪರಿಣಾಮ ಬೀರುತ್ತವೆ, ಹಾಗಾಗಿ ಅವಳು ತನ್ನ ನೋಡಲು ಬಂದ ನರ್ಸುಗಳು, ವೈದ್ಯರ ಮೇಲೆ ಹಲ್ಲೆ ಮಾಡಿದ ಅನೇಕ ಪ್ರಸಂಗಗಳಿವೆ. ಅದೆಲ್ಲ ನೆನಪಾಗಿ ಒನ್ ಗಹಗಹಿಸಿ ನಕ್ಕಳು.

ಬಾರ್ಬಿ ಗೊಂಬೆ ಮುದಿಯಾದಂತೆ ತೋರುತ್ತಿದ್ದ ನಂಬರ್ ಒನ್ ಳ ಕುಲುಕು ಮೈ ನೋಡುತ್ತಾ ಲಿಂಡಾ ಕೋಪದಿಂದ ಕೆಂಪಾದಳು.

ನಂಬರ್ ಸೆವೆನ್ ಳ ಮುಖ್ಯ ಕೆಲಸ ಕ್ವಿಂಟಲ್ ಗಟ್ಟಳೆ ರಾಸಾಯನಿಕಗಳನ್ನು ಎಲ್ಲೆಲ್ಲಿಂದಲೋ ತರುವುದು. ಕೆಲ ರಾಸಾಯನಿಕಗಳು ಲೈಸೆನ್ಸ ಉಳ್ಳ ಕಂಪನಿಯವು. ಅವು ಟ್ರಕ್ಕಿನಲ್ಲಿ ಬಂದು ಸೀದಾ ಕೇಂದ್ರದ ತಂಪು ತಾಪಮಾನದ ಪ್ರಯೋಗಾಲಯಕ್ಕೇ ಹೋಗುತ್ತವೆ. ಆದರೆ ಇನ್ನು ಕೆಲವನ್ನು ಎಲ್ಲಿಂದ ತರುತ್ತಾರೆಂದು ಆ ಭಗವಂತನಿಗೆ ಇಲ್ಲಾಂದರೆ ನಮ್ಮ ನಂಬರ್ ಸೆವೆನ್ ಳಿಗೆ ಗೊತ್ತು. ಅವಳ ಕೆಲಸವೆಲ್ಲ ರಾತ್ರಿಯೇ. ಅವಳನ್ನು ಮೇಲಿನವರು ಯಾವ್ಯಾವುದೋ ಪ್ರಾಂತ್ಯಕ್ಕೆ ಕಳಿಸುತ್ತಾರೆ. ಕೇವಲ ತನ್ನ ಮುಷ್ಟಿ ಬಲದಿಂದಲೇ ಅವಳು ಸೆಕ್ಯುರಿಟಿ ಗಾರ್ಡ್, ಗೋದಾಮಿನ ಉಸ್ತುವಾರಿ ಮಾಡುವವ ಇತ್ಯಾದಿ ಮಂದಿಯನ್ನು “ನೋಡಿಕೊಳ್ಳುತ್ತಾಳೆ” ಎಂಬ ಪ್ರತೀತಿ! ಅವಳ ಏಳಡಿಗಳ ಭೀಕರ ಆಕಾರ ಅದಕ್ಕೆ ಒತ್ತು ಕೊಡುವುದಂತೂ ಸತ್ಯ.

ಶಬ್ದವೊಂದೂ ಕೇಳದೆ ಬರಿದೇ ಸಿಟ್ಟಿನಿಂದ ಅದುರುತ್ತಿದ್ದ ಲಿಂಡಾಳ ಬಾಯಿಯನ್ನು ನೋಡಿ ನಂಬರ್ ಒನ್ ಗೆ ತನ್ನ ಬಾಣ ಗುರಿ ಮುಟ್ಟಿದಂತೆ ತೃಪ್ತಿಯಾಯ್ತು.

ಎಲ್ಲರ ಬಾಯಿಗಳನ್ನು ಒತ್ತಾಯವಾಗಿ ತೆರೆದು ಲಿಂಡಾ ನಾಷ್ಟಾದ ಗುಳಿಗೆ ತುರುಕಿದಳು. ಎಂಥಂಥದೋ ಕಹಿ ನುಂಗಿದವರಲ್ಲವೆ ಅವರೆಲ್ಲಾ? ಇದನ್ನೂ ನೀರಿಲ್ಲದೆ ಗಂಟಲಿಗಿಳಿಸಿಕೊಂಡರು.

“ಇವತ್ತೇ ಅಂದುಕೊಂಡ ಕೆಲಸ ಬೇಗ ಮುಗಿಸಬೇಕು, ನಾಳೆ ನನ್ನ ಮಗ ಬರುವವನಿದ್ದಾನೆ ಭೇಟಿಗೆ”. ನಂಬರ್ ಸೆವೆನ್ ಉತ್ಸಾಹದಿಂದ ಹೇಳಿದಳು.

‘ಹತ್ತು ವರ್ಷದಿಂದ ಬರದವ ಈಗೇಕೆ ಬರ್ತಿದ್ದಾನೋ ಅಮ್ಮನ ಕೈಯಡುಗೆಯಲ್ಲಿ ಸ್ವಾದವಿಲ್ಲ ಅಂತ ಯಂತ್ರದ ಕಡೆ ಅಡುಗೆ ಮಾಡಿಸಿಕೊಂಡವನಲ್ಲವೆ ನಿನ್ನ ಮಗ?’ ನಂಬರ್ ಒನ್ ತಾತ್ಸಾರದಿಂದ ಮುಂದುವರೆಸಿದರು ‘ಮುಂಬಯಿಯ ಕುಲಾಬಾದಲ್ಲಿ ಅವನ ಮನೆಯ ಎದುರಿಗೇ ಎರಡು ವೃದ್ಧಾಶ್ರಮ ಇದೆ. ಅಲ್ಲಿ ಅವ್ವನನ್ನು ಇಟ್ಟಿದರೆ ಏನಾಗುತ್ತಿತ್ತವನಿಗೆ? ಅವಳಿಗೆ ತಿಂಗಳ ಖರ್ಚು ಕಳಿಸುವಷ್ಟನ್ನಂತೂ ಗಳಿಸಿಯೇ ಗಳಿಸುತ್ತಾನೆ, ಆರಾಮಾಗಿ ಗೆಳತಿಯರ ಜೊತೆ ಅಲ್ಲಿರುತ್ತಿದ್ದಳು. ಇಲ್ಲಿ ಬಂದು

**ಅಂತೂ ಸ್ವಂತ ಇಚ್ಛೆಯಿಂದ ಇಲ್ಲಿ ಬಂದು ಸೇರಿಕೊಂಡವಳೆಂದರೆ ನಂಬರ ಸಿಕ್ಸ್ ಒಬ್ಬಳೇ. ರಾಸಾಯನಿಕಳನ್ನು ಚುಚ್ಚಿ ದೇಹ ಕುಬ್ಜ ಮಾಡಿದರೇನಾಯ್ತು? ಹಸಿವೇ ಇಂಗಿ ಹೋಗುವಂತೆ ಕರುಳು ಜಠರಗಳನ್ನು ಮಾರ್ಪಾಡು ಮಾಡಿದರೇನಾಯ್ತು? ಕಾಯಂ ಆಗಿ ಈ ನೆಲೆಮನೆಯ ಪ್ರಯೋಗಾಲಯದಲ್ಲಿಯೇ ಇದ್ದರೆ ತಾನೆ ಏನಾಯ್ತು? ತನ್ನದು ಅಂತ ಹೇಳ್ಕೊಳ್ಳುವ ದೇಹ ಇದೆಯಲ್ಲ ಸಾಕು. ಮೆಲ್ಲನೆ ನಕ್ಕಳು ನಂಬರ್ ಸಿಕ್ಸ್.**

ಹೊಡೆದಾಟ ಬಡಿದಾಟ ಮಾಡ್ತಾ....ಛೇ' ಮೂಲಂಗಿಯಷ್ಟೇ ಚಿಕ್ಕದಾದ ಕೈಕಾಲುಗಳನ್ನು ನೀವಿಕೊಳ್ಳುತ್ತಾ ನಂಬರ್ ಒನ್ ಹೇಳಿದರು.

ನಂಬರ್ ಸೆವೆನ್ ನ ಕೆಲಸ ಮೇಲಿನ ಲೋಕದಲ್ಲಿ ಏನಾದರೂ ಇರಲಿ ಇಲ್ಲಂತೂ ಅವಳು ಎಲ್ಲರ ದೋಸ್ತಳೇ. ಹೀಚಿದ ಅವಳ ಎದೆಗೂಡಲ್ಲೂ ಇರೋದು ನೋವೇ ತಾನೆ? ಅವಳಿಗೆ ನಿದ್ದೆಯೇ ಇಲ್ಲ, ಸುಸ್ತೇ ಆಗದಂತೆ ಅವಳ ಸ್ನಾಯುಗಳನ್ನು ಹಗಲಿರುಳು ತರಬೇತಿಗೊಳಿಸಲಾಗುತ್ತಿರುವಾಗ ಎಲ್ಲಿಯ ನಿದ್ದೆ? ಆದರೂ ಅವಳಿಗೆ ಸತತ ಏನೋ ಬೇಚೈನಿ. ರಾತ್ರಿಯೆಲ್ಲ ನಿದ್ದೆಗೆಟ್ಟ ಕಣ್ಣುಗಳನ್ನು ತಿಕ್ಕಿಕೊಂಡಳವಳು.

"ಶ್..ಶ್... ಆವಾಜ್ ಕೆಳಗೆ..."ಯಾರೂ ತಮ್ಮ ಮಾತು ಕೇಳಿಕೊಳ್ಳಲು ಸಾಧ್ಯವೇ ಇಲ್ಲ ಅಂತ ಗೊತ್ತಿದ್ದೂ ನಂಬರ್ ಸೆವೆನ್ ಪಿಸುಗುಟ್ಟಿದಳು. "ತಮ್ಮ ಮನೆಯಲ್ಲಿ ಹೊಸ ಕೂಸು ಹುಟ್ಟಿದರೆ ನೂರರ ಮೇಲೆ ವಯಸ್ಸಾದವರು ತಾವೇ ತಾವಾಗಿ ಮುಂದೆ ಬಂದು ಇಂಜೆಕ್ಷನ್ ತೆಕ್ಕೊಂಡು ಸಾಯ್ಬೇಕು ಅಂತ ಸರಕಾರ ಹೊಸ ಕಾನೂನು ತಂದಿರೋದು ಗೊತ್ತಿಲ್ಲವೆ? ಒಂದು ಕೂಸು ಬರಬೇಕು – ಒಬ್ಬ ವೃದ್ಧ ಹೋಗಬೇಕು. ಒಟ್ಟಿನಲ್ಲಿ ಕುಟುಂಬದ ಸಂಖ್ಯೆ ಮುಂಚಿನಷ್ಟೇ ಇರಬೇಕು ಅಂತ ರೂಲಂತೆ. ನನ್ನ ಮಗ ಕಾಶಿಗೆ ಗಂಡು ಮಗು ಹುಟ್ಟಿ ವರ್ಷವಾಗಿತ್ತು, ಆದರೂ ಅವ ನನ್ನ ಕೊಲ್ಲದೆ ಎಲ್ಲೆಲ್ಲೋ ಮುಚ್ಚಿಟ್ಟು ಕಡೆಗೆ ನನ್ನ ಇಲ್ಲಿ ತಂದಿಟ್ಟಿದ್ದಾನೆ ಗೊತ್ತಾ?"

ಅವಳ ಧ್ವನಿಯಲ್ಲಿ ಚಿಮ್ಮಿದ ಮಗನ ಬಗೆಗಿನ ಹೆಮ್ಮೆ ಕಂಡು ನಂಬರ್ ಒನ್ ಮುಖ ಸಿಂಡರಿಸಿದರು. 'ಸಾಯೋದೇ ಮೇಲು ಹೀಗೆ ಅರ್ಧ ಘೂಟಿನ ದೇಹ ಇಟ್ಕೊಂಡು, ಊಟಕ್ಕೆ ಗುಳಿಗೆ ನುಂಗಿಕೊಂಡು, ಪ್ರಯೋಗಾಲಯಗಳ ರಾಸಾಯನಿಕ ವಾಸನೆ ಕುಡ್ಕೊಂಡು ಇರೋದಕ್ಕಿಂತ.'

"ಹಾಗನ್ನಬೇಡಿ ನಂಬರ್ ಒನ್. ಪೂರಾ ಜಗತ್ತಿನಲ್ಲಿ ಜಾಗವೇ ಕಮ್ಮಿಯಾಗ್ತಿದೆ, ದುಡಿಯೋ ಮಂದಿಗೇ ಜಾಗವಿಲ್ಲ ಇನ್ನು ನಮ್ಮಂಥವರಿಗೆಲ್ಲಿ? ಕಾಲಕ್ಕೆ ತಕ್ಕಂತೆ ಬದಲಾಗಲೇ ಬೇಕಲ್ಲ. ಹಾಗೆ ನಮ್ಮದೂ ತಪ್ಪಿದೆ ಇದರಲ್ಲಿ. ಮಾರುಕಟ್ಟೆಯಲ್ಲಿ ಲಭ್ಯ ಇದೆ ಅಂತ ಸ್ನಾಯುಗಳೇ ಮೆತ್ತಗಾಗದಂತೆ ಗುಳಿಗೆ ತೆಕ್ಕೊಂಡೆವಲ್ಲ ಅದು ಸರಿಯೇ?"

"ಸರಿ ಏಕಲ್ಲ? ನಮ್ಮ ದೇಹ ನಾವು ಕಾಪಾಡಿಕೊಳ್ಳೋದು, ಹೆಚ್ಚೆಚ್ಚು ಜೀವಿಸೋದು ಜನ್ಮಸಿದ್ಧ ಹಕ್ಕಲ್ಲವೆ?"

"ಖಂಡಿತ ಹೌದು, ಆದರೆ ಮುಂದಿನ ಜೀವನ ಹ್ಯಾಗಿರಬಹುದು ಅಂತ ವಿಚಾರ ಮಾಡದಿದ್ದುದು ತಪ್ಪು. ಈಗ "ಕಾಯ ಕುಬ್ಜ ಕೇಂದ್ರ"ಕ್ಕೆ ಮಕ್ಕಳು ತಂದು ಬಿಟ್ಟ ಬಗ್ಗೆ ತಕರಾರು ಮಾಡೋದು ತಪ್ಪು. ಕಾಯ ಕುಗ್ಗಲಿ ಇಲ್ಲಾ ಹಿಗ್ಗಲಿ ವಯಸ್ಸಾದಂತೆ ನಮ್ಮ ಜಗತ್ತಂತೂ ಕುಗ್ಗಿಯೇ ಕುಗ್ಗುತ್ತದೆ ಅಂತ ತಿಳ್ಕೊಳ್ದೇ ಇದ್ದುದು ತಪ್ಪು" ನಂಬರ ಸೆವೆನ್ ಳ ಮಾತಿಗೆ ಮರುಜವಾಬು ಕೊಡಲು ಏನೂ ಉಳಿಯದ್ದರಿಂದ ನಂಬರ್ ಒನ್ ಸುಮ್ಮನಾದಳು. ಅಷ್ಟರಲ್ಲಿ ಮತ್ತೆ ಲಿಂಡಾ ಬಂದಂತೆ ಭಾಸವಾಯ್ತು. ನಂಬರ್ ಸೆವೆನ್ ಕಾಲು ಮುದುರಿಕೊಂಡಳು. ಅವಳಿಗೆ ದೈತ್ಯಾಕಾರದ ಏಳು ಘೂಟು ಎತ್ತರದ ನೂರಾ ಎಂಬತ್ತು ಕೆ ಜಿಯ ದೇಹವೇನೋ ಇದೆ ಆದರೆ ಸ್ನಾಯು ನಿಯಂತ್ರಣ ಹೆಚ್ಚಿಲ್ಲ. ಆಗಾಗ ಮೂತ್ರ ವಿಸರ್ಜನೆ ಗೊತ್ತಿಲ್ಲದಂತೆ ಆಗಿಬಿಡುತ್ತದೆ. ಹೀಗಾಗಿ ಲಿಂಡಾ ಬಳಿ ಬಂದರೆ ಸಾಕು ಅವಳ ಬಯ್ಗಳು, ಡಾಯಪರ ಬದಲಿಸುವ ಅವಳ ಒರಟು ಕೈಗಳನ್ನು ನೆನೆದೇ ಜೀವ ಮುದುಡುತ್ತದವಳಿಗೆ.

ಲಿಂಡಾ ಧಡಪಡ ಸದ್ದು ಮಾಡುತ್ತಾ ಸಿಟ್ಟಿನಿಂದ ಭುಸುಗುಟ್ಟುತ್ತಾ ಇಂಥಾ ಕೆಲಸ ಮಾಡಬೇಕಾಗಿ ಬಂದ ತನ್ನ ಅಸಹಾಯಕತೆಯನ್ನು ಸೆವೆನ್ ಳ ತರಿದ ತೊಡೆಗಳ ಮೇಲೆ ತೋರಿಸಿ ಎಲ್ಲರೆದುರೇ ತನ್ನ ಕೆಲಸ ಮುಗಿಸಿಹೋದ ಮೇಲೆ ಮಾತು ಮತ್ತೆ ಆರಂಭವಾಯ್ತು.

"ನಮಗೆ ಈ ನರ್ಸ ಬೇಡ ಅನ್ನೋದು ಮೊದಲನೆಯ ಪಾಯಿಂಟ್. ಲಿಂಡಾ ಬಾಣಂತನದ ಸೂಟಿಗೆ ಹೋದಾಗ ಬಂದಿದ್ದಳಲ್ಲ 'ಸಖಿ' ಅವಳನ್ನೇ ನಮ್ಮ ದೇಖರೇಖಿಗಾಗಿ ನಿಯುಕ್ತಗೊಳಿಸಬೇಕು – ಇದು ಎರಡನೆಯ ಪಾಯಿಂಟು." ನಂಬರ್ ಒನ್ ತಮ್ಮ ಪಾಯಿಂಟುಗಳ ಮುಗಿದಂತೆ ಸುಮ್ಮನಾದರು. ಹಾಗೆ ಅವರು ತಮ್ಮ ಈ ಮಾತು ಕೇಂದ್ರದ ಮುಖ್ಯಾಧಿಕಾರಿಗೆ ಮುಟ್ಟಿಸಲು ಮಾಡಿದ ಮೊದಲ ಪ್ರಯತ್ನವೇನಲ್ಲ ಇದು. ಹಿಂದೊಮ್ಮೆ ಒಮ್ಮೆಲೆ ಕೈ ಕಾಲು ಸೆಟೆದಂತೆ ಬಿದ್ದು ತುರ್ತು ತಂಡದವರು ಮಗನನ್ನು ಕೆಳಕ್ಕೆ ಕರಿಸುವಂತೆ ಮಾಡಿದ್ದರು. ಅವನನ್ನು ಒಮ್ಮೆ ಕಾಣಬೇಕೆಂತ ಅವರ ಮನಸ್ಸೂ ತವಕಿಸುತ್ತಿತ್ತಲ್ಲ? ಬಂದು ಮಾರು ದೂರದಲ್ಲಿ ಕುರ್ಚಿಯ ತುದಿಗಂಟಿ, ಒಮ್ಮೆ ಎದ್ದು ಹೋದರೆ ಸಾಕೆಂಬಂತೆ ಕೂತ ಅವನಿಗೂ ಈ ಸಂದೇಶ ಕಳಿಸಿದ್ದರು. ಎಂದಿನಂತೆ ಅವಳ ಮಾತು ಅವ ಕೇಳಿಸಿಕೊಂಡಿರಲೇ ಇಲ್ಲ.

'ಆದರೆ ಸಖಿ ... ಯಂತ್ರವಲ್ಲವೆ?....ಅದೇ ಎಂಡ್ರಾಯ್ಡ್' ನಂಬರ್ ಫೋರ್ ತಡವರಿಸಿದಳು.

"ಖಂಡಿತ ಹೌದು, ಆದರೆ ಮುಂದಿನ ಜೀವನ ಹ್ಯಾಗಿರಬಹುದು ಅಂತ ವಿಚಾರ ಮಾಡದಿದ್ದುದು ತಪ್ಪು. ಈಗ "ಕಾಯ ಕುಬ್ಜ ಕೇಂದ್ರ"ಕ್ಕೆ ಮಕ್ಕಳು ತಂದು ಬಿಟ್ಟ ಬಗ್ಗೆ ತಕರಾರು ಮಾಡೋದು ತಪ್ಪು. ಕಾಯ ಕುಗ್ಗಲಿ ಇಲ್ಲಾ ಹಿಗ್ಗಲಿ ವಯಸ್ಸಾದಂತೆ ನಮ್ಮ ಜಗತ್ತಂತೂ ಕುಗ್ಗಿಯೇ ಕುಗ್ಗುತ್ತದೆ ಅಂತ ತಿಳ್ಕೊಳ್ದೇ ಇದ್ದುದು ತಪ್ಪು" ನಂಬರ ಸೆವೆನ್‌ಳ ಮಾತಿಗೆ ಮರುಜವಾಬು ಕೊಡಲು ಏನೂ ಉಳಿಯದ್ದರಿಂದ ನಂಬರ್ ಒನ್ ಸುಮ್ಮನಾದಳು

'ಎಂಡ್ರಾಯ್ಡ್ ಇದ್ದರೇನಾಯ್ತು? ಅವಳಿಗದೆಂಥಾ ರೇಶಿಮೆಕೂದಲು! ಮುದ್ದಾದ ಮುಖ. ಬಾಯಿ ತೆಗೆಯೋದೇ ನಗೋದಕ್ಕೆ ಅನ್ನೋ ಥರಾ ಪ್ರಸನ್ನತೆ.'

'ಅರೆ ಯಾವಾಗ್ಲೂ ತುಟಿ ನಸು ಬಿರಿದಂತೆ ಇರಿಸೋದಕ್ಕೆ ಕಮಾಂಡಿದೆ ಅದಕ್ಕೆ. ಯಾವಾಗ್ಲೂ ಪ್ರಫುಲ್ಲವಾಗಿರೋದಕ್ಕೆ, ಹೇಳಿದ ಕೆಲಸವೆಲ್ಲಾ ಮರು ಮಾತಾಡದೆ ಮಾಡೋದಕ್ಕೆ ಪ್ರೋಗ್ರಾಮ್ ಬರೆದು ಚಿಪ್ ನೊಳಗೆ ತುಂಬಿ ಅದರೊಳಗೆ ಹಾಕಿರ್ತಾರಂತೆ' ತಂತ್ರಜ್ಞಾನವನ್ನೆಲ್ಲಾ ಕುಡಿದು ಅರಗಿಸಿಕೊಂಡಂತೆ ನಂಬರ್ ಸಿಕ್ಸ್ ಉವಾಚ.

'ಕಮಾಂಡೋ ಮತ್ತಿನ್ನೇನೋ? ನಮಗೇನು ಮಾಡುವುದು ತೆಕ್ಕೊಂಡು? ಅವಳನ್ನು ನೋಡಿದ್ರೇನೇ ಖುಷಿಯಾಗ್ತದೆ. ಅಲ್ಲದೆ ಅವಳ ಕೈಗಳೆದಷ್ಟು ಮೃದು, ಡಾಯಪರ ಬದಲಿಸುವಾಗ ನನಗೆ ನೋವೇ ಆಗೋಲ್ಲ' ನಂಬರ್ ಸೆವೆನ್ ಧ್ವನಿಗೂಡಿಸಿದಳು.

'ಎಲ್ಲಾ ಕೆಲಸ ಲಿಂಡಾಳಿಗಿಂತ ಸಖಿ ಸ್ಪೀಡಾಗಿ ಮಾಡ್ತಾಳೆ. ಹೇಳಿದ್ದಕ್ಕೆಲ್ಲಾ ತುಟಿ ಪಿಟಕ್ಕೆನ್ನದೆ ಗೋಣಾಡಿಸುತ್ತಾಳೆ, ಕೇಳಿದ್ದೆಲ್ಲ ತಂದು ಕೊಡುತ್ತಾಳೆ. ಇದಕ್ಕಿಂತಾ ಹೆಚ್ಚು ನೀನಾದ್ರೂ ಏನು ಮಾಡಿದ್ದೀ ಬದುಕಲ್ಲಿ ಹೇಳು ನೋಡೋಣ ನಂಬರ್ ಫೈವ್?' ನಂಬರ್ ಒನ್ ಸವಾಲೆಸೆದರು.

'ನಂಬರ್ ಫೈವ್ ಅಲ್ಲ ಫೋರ್' ಯಾರೋ ತಪ್ಪು ತಿದ್ದಿದರು.

"ಫೋರೋ, ಫೈವೋ ನಂಬರಿನಲ್ಲೇನಿದೆ? ಎಲ್ಲಾರೂ ಒಂದೇ" ನಂಬರ್ ಒನ್ ಳೇ ಒಮ್ಮೆಲೇ ಏರಿದ ಧ್ವನಿಗೆ "ಇಲ್ಲ ನಮ್ಮ ನಂಬರ್ ಬೇರೆ; ನಮ್ಮ ಬದುಕು ಬೇರೇನೇ" ಅಂತ ಸುಳ್ಳು ಹೇಳಲು ಬಾಯಿ ಬಾರದೆ ಎಲ್ಲ ಮೌನವಾದರು.

ಒಮ್ಮೆಲೆ ಆವೇಶ ಬಂದವರಂತೆ ಒಕ್ಕೊರಲಿನಿಂದ ಎಲ್ಲಾ ಕೂಗಿದರು. "ಹೌದು ನಮಗೆ ಲಿಂಡಾ ಬೇಡ. ಸಖಿ ಬೇಕು."

ಸರಿ ಎಲ್ಲ ತಂತಮ್ಮ ಪುಟ್ಟ ಡಾಯಲುಗಳಲ್ಲಿ ಏನೋ ಟಕಟಕಿಸಿದರು, ನಂಬರ್ ಒನ್ ಹೇಳಿದ ಹೆಸರಿಗೆ ತಮ್ಮ ಪಾಯಿಂಟುಗಳನ್ನು ರವಾನಿಸಿದರು.

"ಸರಿ ಲಿಂಡಾ ಇನ್ನೈದು ನಿಮಿಷದಲ್ಲಿ ಬರುತ್ತಾಳೆ. ಬೇಗ ಬೇಗ ಹತ್ತಿ ಇದರಲ್ಲಿ."

ಪೂರ್ತಿ ವರ್ಷದ ಆಯಾ ದಿನದ ಗುಳಿಗೆಗಳನ್ನಿರಿಸುತ್ತಿದ್ದ ಪ್ಲಾಸ್ಟಿಕ್ ಖಾನೆಗಳ ದೊಡ್ಡ ಡಬ್ಬ ತೆರೆದ ನಂಬರ್ ಸೆವೆನ್ ಹೇಳಿದಳು. ಸೋಮವಾರದ ಖಾನೆಯಲ್ಲಿ ನಂಬರ್ ಸಿಕ್ಸ್, ಮಂಗಳವಾರದ ಖಾನೆಯಲ್ಲಿ ನಂಬರ್ ಫೋರ್, ಹೀಗೆ ಕೈಗೆಟುಕಿದ ಖಾನೆಗಳ ಒಳಗೆ ಮೊದಲೇ ಹೇಳಿಟ್ಟ ನಾಲ್ಕು ಸದಸ್ಯೆಯರು ಜಿಗಿದು ಕೂತರು.

"ಲಿಂಡಾ ಬಹಳ ದಕ್ಷೆ, ಅವಳ ಉಸ್ತುವಾರಿಯಲ್ಲಿ ಎಲ್ಲ ವೃದ್ಧರೂ ಅತ್ಯಂತ ಸುರಕ್ಷಿತ ಅಂತ ಇಲ್ಲಿನ ಜನ ಬೊಬ್ಬೆ ಹೊಡೀತಾರಲ್ಲ. ಈಗ 'ನಾಲ್ಕು ವೃದ್ಧರು

ಕಳಕೊಂಡಿದ್ದಾರೆ' ಅಂತ ನಂಬರ್ ಸೆವೆನ್ ಮೇಲಿನಧಿಕಾರಿಗೆ ದೂರು ಕೊಡ್ತಾಳೆ. ಆವಾಗ ಗೊತ್ತಾಗುತ್ತೆ ಅವಳ ದಕ್ಷತೆ" ನಂಬರ್ ಒನ್ ನಗುತ್ತಾ ಎಲ್ಲರಿಗೂ ಸಂದೇಶ ಕಳಿಸಿದರು.

"ಅಂದರೆ ಡಬ್ಬಿಯನ್ನು ಮುಚ್ಚಿಟ್ಟು ಬರುವವಳೂ ಅವಳೇ. ದೂರು ಕೊಡುವವಳೂ ಅವಳೇಯೇ?"

"ಎಸ್" ತನುಜಾ ಗೆದ್ದ ಖುಷಿಯಲ್ಲಿ ಬೀಗಿದರು. 'ಆಮೇಲೆ ಲಿಂಡಾಳನ್ನು ನಾವಲ್ಲ, ಆಡಳಿತ ವರ್ಗವೇ ಬದಲಾಯಿಸುತ್ತದೆ. ಆಗ ನಾವು ಮತ್ತೊಮ್ಮೆ ಸಖಿಯ ವಿಷಯ ಅವರ ಮುಂದೆ ಮಂಡಿಸೋಣ'.

ಆಡಳಿತ ವರ್ಗದವರಿಂದಲೂ ಏನೂ ಸಂದೇಶವಿಲ್ಲ. ನಂಬರ ಸೆವೆನ್ ಳ ಎದೆ ಮೇಲೆ ತಾನೇ ಬಿಟ್ಟು ಬಂದ ನಾಲ್ಕು ಸದಸ್ಯೆಯರ ಬಗ್ಗೆ ಯೋಚಿಸಿ ಡವಗುಟ್ಟುತ್ತಿತ್ತು. 'ಯಾರಾದ್ರೂ ತಿಳಿಯದೆ ಅವರನ್ನು ಹೊಲಸು ಬಟ್ಟೆಗಳೊಟ್ಟಿಗೆ ವಾಶಿಂಗ ಮೆಶೀನಿಗೆ ಹಾಕಿ ಬಿಟ್ಟರೆ? ಅಥವಾ ಬಟ್ಟೆ ಕತ್ತಿಗೇನಾದರೂ ಸುತ್ತು ಹಾಕಿಕೊಂಡ ಉಸಿರುಗಟ್ಟಿದರೆ?' ಹೀಗೆ ಏನೆಲ್ಲ ವಿಚಾರಗಳು!

ಅಷ್ಟರಲ್ಲಿ ಸೆವೆನ್ ಳ ಡಾಯಲ್ ನಿಂದ ಬಂದಿತ್ತು ಮೇಲಿನಾಫೀಸಿನ ಬೀಪ್ ಬೀಪ್ ಸದ್ದು. "ಲಿಂಡಾಳನ್ನು ತುರ್ತಾಗಿ ವಜಾ ಮಾಡಲಾಗುತ್ತಿದೆ. ಕಳಕೊಂಡ ನಾಲ್ಕು ಸದಸ್ಯೆಯರು ಸಿಕ್ಕಿದ್ದಾರೆ. ಸದಸ್ಯೆಯರು ಮುಂದಿನ ನರ್ಸಳ



ಯಾರಿಗಾದ್ರೂ ಗೊತ್ತಾದ್ರೆ .... ನಂಬರ್ ಫೋರ್ ಳಿಗೆ ಯಾವತ್ತೂ ಅನುಮಾನ.

'ಗೊತ್ತಾದ್ರೆ ಏನೀಗ? ನಾಲ್ಕು ದಿನ ಊಟದ ಗುಳಿಗೆ ಕೊಡಲಿಕ್ಕಿಲ್ಲ ಅಷ್ಟೆ. ಸೋ ವಾಟ್? ಹಸಿವೆಯಂತೂ ಗೊತ್ತೇ ಆಗುವುದಿಲ್ಲ ಅಂದಮೇಲೆ ಯಾತರ ಹೆದರಿಕೆ?

ಲಿಂಡಾ ಬರುವ ಮುನ್ನ ಮುಂಚೆಯೇ ಠರಾಯಿಸಿದಂತೆ ಸೆವೆನ್ ಡಬ್ಬಿಯನ್ನೆತ್ತೊಯ್ದು ಲಿಫ್ಟಿನಲ್ಲಿದ್ದ ಲಾಂಡ್ರಿಯವರ ತಳ್ಳುಗಾಡಿಯ ಕೆಳಗಿಟ್ಟು ಬಟ್ಟೆ ಮುಚ್ಚಿ ಬಂದಿದ್ದಳು. ತಾನೂ ಸರಸರನೆ ಮೆಟ್ಟಿಲೇರಿ ಮೇಲಕ್ಕೆ ಹೋಗಿ ಆಮೇಲೆ ಬಂದ ಲಿಫ್ಟಿನಿಂದ ಡಬ್ಬಿಯನ್ನೆತ್ತಿಕೊಂಡು ಹೋಗಿ ವಾಶಿಂಗ್ ಮಶೀನುಗಳಿದ್ದ ಕೋಣೆಯಲ್ಲಿ ಅವಿತಿಟ್ಟು ದೂರಿನ ವಿಭಾಗದತ್ತ ಓಡಿದ್ದಳು.

ಇಂದು ರವಿವಾರ ಬೆಳಿಗ್ಗೆ. ಅಂದರೆ ನಾಲ್ಕು ಜನ ಮೇಲಿನ ಜಗತ್ತಿಗೆ ಹೋಗಿ ಪೂರ್ತಿ ಹದಿನೈದು ತಾಸಾಗಿವೆ. ಲಿಂಡಾಳ ಸುಳಿವಿಲ್ಲ. ಆದರೆ ಆಯ್ಕೆ ತಾವೇ ಮಾಡಿಕೊಳ್ಳಬೇಕು. ಗರಿಷ್ಠ ಮತಗಳು ಬಿದ್ದವರದ್ದೇ ಆಯ್ಕೆ" ಎರಡೂ ಖುಷಿಯ ಮಜಕೂರು ಒಂದೇ ವಾಕ್ಯದಲ್ಲಿದ್ದವು.

ಹುರ್ರಾ ....ನಿಂತಲ್ಲೇ ಜಿಗಿದಳವಳು. ಅವಳು ಹೇಳದೇನೇ ಕೋಣೆಯಲ್ಲಿದ್ದ ಉಳಿದವರಿಗೂ ಸುದ್ದಿ ಗೊತ್ತಾಗಿತ್ತು.

ಎಲ್ಲರೂ ಏನು ಹೇಳಲೂ ತೋಚದೆ ಸುಮ್ಮನಾದರು.

ಇಡೀ ಕೋಣೆ ಏಕದಂ ಸ್ತಬ್ಧ. ಅಂದರೆ ಮಾತು ಎದೆಯಲ್ಲಿ ಹುಗಿದು ಹೋದ ಮೌನವಲ್ಲ ಮತ್ತೆ. ತಮ್ಮಳಲು ಮೊದಲ ಬಾರಿ ಯಾರದೋ ಕಿವಿ ತಲುಪಿದ ಖುಷಿಗೆ ಮಾತೇ ಬಾರದ ಮೌನವದಾಗಿತ್ತು.

*ಸಪ್ನಾ ಕಟ್ಟಿ ಪುಣೆಯಲ್ಲಿ ಜೀವಿವಿಜ್ಞಾನದಲ್ಲಿ ಸಂಶೋಧಕಿ. ಕಥೆಗಾರ್ತಿ.*

**ಅವನು ಅವಳ ಮಂಚದ ಪಕ್ಕದಲ್ಲೇ ಕುಳಿತು ಅವಳೊಂದಿಗೆ ಸಂಭಾಷಣೆಯಲ್ಲಿ ತೊಡಗಿಕೊಂಡಿದ್ದಾನೆ. ತಾವು ಸಂಧಿಸಿದ ದಿವಸ, ತಾವು ಒಟ್ಟಿಗೆ ಕಳೆದ ಸಂತೋಷದ ದಿನಗಳನ್ನು ಕುರಿತು ಮಾತಾಡಿದ್ದಾನೆ. ಅವಳಿಲ್ಲದೆ ತಾನು ಬದುಕಲಾರೆ ಎಂಬ ಮಾತನ್ನು ಕಣ್ಣೀರು ಸುರಿಸುತ್ತಾ ಹೇಳಿಕೊಂಡಿದ್ದಾನೆ.**




# ವಿಧಿಲಿಖಿತ

● **ಡಾ. ಸಿ. ಪಿ. ರವಿಕುಮಾರ್**

ಪ್ರೊ। ಚೆಂಗ್ ಧ್ವನಿ ಅವನ ಕಿವಿಗಳಲ್ಲಿ ಅನುರಣಿಸಿತು. "ವಿಧಿಲಿಖಿತ ಎಂದು ಕೈಚೆಲ್ಲಿ ಕೂಡುವ ಅಗತ್ಯವೇ ಮುಂದೆ ಬೀಳಲಾರದು. ಹಣೆಬರಹವನ್ನು ತಿದ್ದಿಕೊಳ್ಳಬಹುದು!" ಅವನು ಕಣ್ಮುಚ್ಚಿ ಯೋಚನೆಯಲ್ಲಿ ತೊಡಗಿದ. ಅವನ ತಲೆಯಲ್ಲಿ ಒಂದು ಯೋಚನೆ ಹಾದುಹೋಯಿತು. ತನ್ನ ಕಲ್ಪನೆಗೆ ಬೆಚ್ಚಿ ಅವನು ಒಂದೆರಡು ಕ್ಷಣ ದಿಗ್ಭ್ರಮೆಗೊಂಡ. ಇದು ಸಾಧ್ಯವಾಗಬಹುದೇ ಎಂದು ಅವನ ಮನಸ್ಸು ಹೊಯ್ದಾಡಿತು.

ಇವತ್ತು ಲ್ಯಾಬಿನಲ್ಲಿ ಕೆಲಸ ಮಾಡುವುದು ಅವನಿಗೆ ಸಾಧ್ಯವಾಗುತ್ತಿಲ್ಲ. ಅವನ ಅನ್ಯಮನಸ್ಕತೆಯನ್ನು ಸಹೋದ್ಯೋಗಿ ಮಧುರಾ ಗಮನಿಸಿದ್ದಾಳೆ. ಪ್ರಶ್ನಾರ್ಥಕವಾಗಿ ಅವನ ಕಡೆಗೆ ನೋಡಿ "ಏನಾಯಿತು?" ಎಂದು ಸನ್ನೆಯಲ್ಲೇ ಕೇಳಿದ್ದಾಳೆ. ಅವನು "ಏನೂ ಇಲ್ಲ" ಎಂಬಂತೆ ತಲೆಯಾಡಿಸಿ ಮುಗುಳ್ನಕ್ಕರೂ ತಾನು ಒಂದೆರಡು ವಾರಗಳಿಂದ ತೊಡಗಿಕೊಂಡಿದ್ದ ಸಂಶೋಧನೆಯಲ್ಲಿ ಏಕಾಗ್ರತೆ ಸಾಧಿಸಲು ಸಾಧ್ಯವಾಗುತ್ತಿಲ್ಲ. ಮೈಕ್ರೊಸ್ಕೋಪಿನಲ್ಲಿ ಇಣುಕಿ ನೋಡುವಾಗ ಅವನಿಗೆ ಸಾಕ್ಷಿಯ ಮುಖವೇ ಕಣ್ಣಿನ ಮುಂದೆ ಬರುತ್ತದೆ. ಮಧುರಾ ಅವನ ಭುಜ ಹಿಡಿದು ಅಲುಗಾಡಿಸಿ "ಅಭಿ, ಏನು ಯೋಚಿಸುತ್ತಾ ಕೂತಿದ್ದೀಯಾ? ಊಟದ ಹೊತ್ತಾಯಿತು!" ಎಂದಾಗ ಅವನು ವಾಸ್ತವಕ್ಕೆ ಬರುತ್ತಾನೆ.

"ನಾನು ಈವಾಗ ಇಬ್ಬರಿಗಾಗಿ ತಿನ್ನಬೇಕು!" ಎಂದು ಮಧುರಾ ತನ್ನ ಉಬ್ಬಿದ ಹೊಟ್ಟೆಯ ಭಾಗದತ್ತ ಬೆರಳು ಮಾಡಿ ನಗುತ್ತಾಳೆ.

ಅವನು ಮೇಲೆದ್ದು ಅವಳ ಕಡೆಗೆ ಪೆಚ್ಚಾದ ನಗೆ ಸೂಸಿ ತನ್ನ ಬಿಳಿ ಕೋಟ್ ಕಳಚಿ ಊಟಕ್ಕೆ ಹೊರಡುತ್ತಾನೆ. ಮಧುರಾ ತನ್ನ ಫೋನಿಗೆ ಬಂದ ಕರೆಯನ್ನು ಸ್ವೀಕರಿಸುತ್ತಾ "ವಾಸು, ನಾನು ಊಟ ಮಾಡೋದನ್ನು ಮರೆಯೋದಿಲ್ಲ. ನಿನ್ನ ಮಗಳನ್ನು ಹಸಿವು ಕೆಡವೋದಿಲ್ಲ!" ಎಂದು ನಗುತ್ತಾ ಹೇಳಿದಳು. ನಂತರ ಅಭಿಯ ಕಡೆಗೆ ತಿರುಗಿ "ನನ್ನ ಗಂಡನಿಗೆ ಮೂರುಹೊತ್ತೂ ನನ್ನದೇ ಚಿಂತೆ. ಮಗು ಬರೋದಕ್ಕೆ ಇನ್ನೂ ಮೂರು ತಿಂಗಳಿದೆ. ಈಗಲೇ ನನಗೆ ರಜಾ ತೊಗೊಂಡು ರೆಸ್ಟ್ ತೊಗೊಳ್ಳೋಕೆ ಹೇಳ್ತಿದಾನೆ!" ಎಂದು ನಕ್ಕಳು.

"ಗಂಡನಿಗೆ ಇಂಥ ಸಂದರ್ಭದಲ್ಲಿ ಟೆನ್ಷನ್ ಇರೋದು ಸ್ವಾಭಾವಿಕ.

ಮನೆಯಲ್ಲಿ ನಿನಗೆ ಸಹಾಯ ಮಾಡೋದಕ್ಕೆ ಅತ್ತೆ, ನಾದಿನಿ, ಅಮ್ಮ, ಅಕ್ಕ, ಯಾರೂ ಇಲ್ಲವಲ್ಲ!"

"ಈಗ ನೀನೂ ಅವನ ಹಾಗೆ ಮಾತಾಡಬೇಡ ಅಭಿ!" ಎಂದು ಮಧುರಾ ಮುನಿಸು ತೋರಿಸಿದಳು.

ಕೆಫೆಟೇರಿಯಾದಲ್ಲಿ ಬಹಳ ಜನರೇನೂ ಇರಲಿಲ್ಲ. ಅವರು ಮೂಲೆ ಯಲ್ಲಿ ಒಂದು ಮೇಜನ್ನು ಹಿಡಿದರು. ಥಾಲಿಗಳಲ್ಲಿ ಊಟ ಬಡಿಸಿಕೊಂಡು ಕುಳಿತರು. ಅವನಿಗೆ ಊಟ ಒಳಗೆ ಹೋಗುತ್ತಿಲ್ಲ. "ಯಾಕೆ ಅಭಿ? ಹುರುಳಿಕಾಯಿ ಪಲ್ಯ ಚೆನ್ನಾಗಿದೆಯಲ್ಲ! ಚನಾ ಮಸಾಲಾ ಕೂಡಾ ಪರವಾಗಿಲ್ಲ. ಊಟ ಮಾಡು. ಏನಾಯಿತು?" ಎಂದು ಮಧುರಾ ಪ್ರಶ್ನಿಸಿದಳು. ಅವನು ಸ್ವಲ್ಪ ಹೊತ್ತು ಸುಮ್ಮನಿದ್ದ.

"ಸಾಕ್ಷಿಯ ಆರೋಗ್ಯ ಮತ್ತಷ್ಟು ಹಾಳಾಗಿದೆ" ಎಂದು ಅವನು ಮೌನ ಮುರಿದ. ಈಗ ಅವಳು ಮೌನ ವಹಿಸಿದಳು.

"ಹೆಚ್ಚೆಂದರೆ ಮೂರು ತಿಂಗಳು ಬದುಕಬಹುದು ಎಂದು ಡಾಕ್ಟರ್ ಹೇಳಿದ್ದಾರೆ."

ಮಧುರಾ ಅವನ ಭುಜದ ಮೇಲೆ ಕೈಯಿಟ್ಟು "ಬಹಳ ಬೇಸರದ ವಿಷಯ, ಅಭಿ. ಸಾಕ್ಷಿ ನರ್ಸಿಂಗ್ ಹೋಮಿನಲ್ಲಿ ಇದ್ದಾಳಾ?" ಎಂದು ಕಳಕಳಿಯಿಂದ ಕೇಳಿದಳು. ಅವನು ತಲೆ ಅಲ್ಲಾಡಿಸಿ "ಇಲ್ಲ. ಮನೆಗೆ ಕರೆತಂದಿದ್ದೇನೆ. ಯಾವ ಮನೆಯನ್ನು ಅವಳು ಅಷ್ಟು ಆಸೆ-ಅಕ್ಕರೆಯಿಂದ ಅಲಂಕರಿಸಿ ಅದರಲ್ಲಿ ಜೀವನೋತ್ಸಾಹವನ್ನು ತುಂಬಿದ್ದಳೋ ಅದೇ ಮನೆಯಲ್ಲೇ ಅವಳು ಕೊನೆಯುಸಿರೆಳೆದರೆ ಅವಳ ಆತ್ಮಕ್ಕೆ ತೃಪ್ತಿಯಾದೀತು. ನಾನು ಒಂದೆರಡು ದಿನ ಅವಳೊಂದಿಗೆ ಕಾಲ ಕಳೆದೆ. ಆದರೆ ಕೋಣೆಯಲ್ಲಿ ತುಂಬಿಕೊಂಡ ಮೌನ ನನಗೆ ಸಹಿಸಲು ಸಾಧ್ಯವಾಗಲಿಲ್ಲ. ಅವಳ ಮಾತು, ನಗೆ, ಅವಳು ಗುನುಗುತ್ತಿದ್ದ ಹಾಡುಗಳು ಎಲ್ಲವೂ ನೆನಪಿಗೆ ಬರತೊಡಗಿದವು. ಈಗ ಶುಶ್ರೂಷೆಗೆ ಒಬ್ಬ ನರ್ಸ್ ಮನೆಗೆ ಬರುತ್ತಾಳೆ. ನಾನು ಮನೆ ತಲುಪಿದಾಗ ಅವಳು ಹೊರಡುತ್ತಾಳೆ. ಲ್ಯಾಬಿನಲ್ಲಿದ್ದರೂ ನನ್ನ ಮನಸ್ಸು ಸಂಶೋಧನೆಯ ಕಡೆಗೆ ಹೊರಳುತ್ತಿಲ್ಲ" ಎಂದು ಅವನು ಕನ್ನಡಕದ ಗಾಜನ್ನು ತೆಗೆದು ಒರಸಿದ.

ಮಧುರಾಳಿಗೆ ಒಮ್ಮೆಲೇ ಪಿಚ್ ಎನ್ನಿಸಿತು. ತನ್ನ ಸಹೋದ್ಯೋಗಿ ಎಂಥ ಕಷ್ಟಗಳನ್ನು ಎದುರಿಸುತ್ತಿರುವಾಗ ತಾನು ಅವನಿಗೆ ವಾಸುವಿನ ಕಾಳಜಿಯ ಬಗ್ಗೆ ಹೇಳಿ ಬಡಾಯಿ ಕೊಚ್ಚಿಕೊಂಡಿದ್ದು ತಪ್ಪೆನ್ನಿಸಿ ಅಪರಾಧಿ ಭಾವನೆ ಅವಳನ್ನು ಆಕ್ರಮಿಸಿಕೊಂಡಿತು. ಅಭಿಯ ಜೀವನದಲ್ಲಿ ಬಂದ ನತದೃಷ್ಟ ತಿರುವು ಅವನನ್ನು ಎಲ್ಲಿಂದ ಎಲ್ಲಿಗೆ ಕರೆದುಕೊಂಡು ಹೋಗಿಬಿಟ್ಟಿತು! ತಂದೆಯಾಗುತ್ತೇನೆ ಎಂಬ ಸುದ್ದಿ ಗೊತ್ತಾದ ಕೂಡಲೇ ಅವನು ಸಹೋದ್ಯೋಗಿಗಳಿಗೆ ಸಿಹಿ ಹಂಚಿಬಿಟ್ಟಿದ್ದ. ಬಾಕ್ಸಿನಿಂದ ಸಿಹಿಯನ್ನು ಪಡೆದುಕೊಳ್ಳುವಾಗ ಅವಳ ಮನಸ್ಸಿನಲ್ಲಿ ಯಾಕೋ ಆತಂಕದ ಸುಳಿಯೊಂದು ಮೂಡಿತ್ತು. "ಅಭಿ, ನಿನಗೆ ಮತ್ತು ಸಾಕ್ಷಿಗೆ ಅಭಿನಂದನೆಗಳು!" ಎಂದು ಅವನ ಕೈಕುಲುಕಿದಳು. "ಗರ್ಭಿಣಿಯಾದ ಸುದ್ದಿಯನ್ನು ಐದಾರು ತಿಂಗಳು ಗುಪ್ತವಾಗಿಡುತ್ತಾರೆ, ನೀನು ಹೀಗೆ ಸಿಹಿ ಹಂಚುವ ಮುನ್ನ ಸಾಕ್ಷಿಯನ್ನು ಕೇಳಿದ್ದೀಯಾ?" ಎಂದು ಮಧುರಾ ಕೇಳಿದಳು. ಅವನು "ಸಿಹಿ ಹಂಚೋದಕ್ಕೆ ಯಾರನ್ನೂ ಕೇಳೋದು ಬೇಕಾಗಿಲ್ಲ! ಇಷ್ಟಾಗಿ ಇಂಥದನ್ನು ಗುಟ್ಟಾಗಿ ಇಡೋದಕ್ಕೆ ಸಾಧ್ಯವೇ!" ಎಂದು ಜೋರಾಗಿ ನಕ್ಕ. ಆದರೆ ವಿಧಿಯ ನಿರ್ಧಾರವೇ ಬೇರೆಯಾಗಿತ್ತು. ತನ್ನ ಆಫೀಸಿಗೆ ಹೋಗುವಾಗ ನಡೆದ ಕಾರ್ ಅಪಘಾತದಲ್ಲಿ ಸಾಕ್ಷಿ ಮಗುವನ್ನು ಕಳೆದುಕೊಂಡಳು. ಅವಳಿಗೂ ಗಂಭೀರ ಗಾಯಗಳಾದವು. ಅವಳು ಕೋಮಾ ಸ್ಥಿತಿಗೆ ಜಾರಿದಳು.

**ಕೋಮಾ ಸ್ಥಿತಿಯಲ್ಲೂ ಮನಸ್ಸು ಜಾಗ್ರತವಾಗಿರುತ್ತದೆ ಎನ್ನುತ್ತಾರೆ. ಸಾಂತ್ವನದ ಮಾತುಗಳಿಗೆ ಮನಸ್ಸು ಪ್ರತಿಕ್ರಿಯಿಸುತ್ತದೆ, ಕೋಮಾದಿಂದ ಹೊರಬರಲು ಉದ್ದೀಪಿಸುತ್ತದೆ ಎಂಬುದಕ್ಕೆ ಉದಾಹರಣೆಗಳಿವೆ. ಅವನು ಅವಳ ಮಂಚದ ಪಕ್ಕದಲ್ಲೇ ಕುಳಿತು ಅವಳೊಂದಿಗೆ ಸಂಭಾಷಣೆಯಲ್ಲಿ ತೊಡಗಿಕೊಂಡಿದ್ದಾನೆ. ತಾವು ಸಂಧಿಸಿದ ದಿವಸ, ತಾವು ಒಟ್ಟಿಗೆ ಕಳೆದ ಸಂತೋಷದ ದಿನಗಳನ್ನು ಕುರಿತು ಮಾತಾಡಿದ್ದಾನೆ. ಅವಳಿಲ್ಲದೆ ತಾನು ಬದುಕಲಾರೆ ಎಂಬ ಮಾತನ್ನು ಕಣ್ಣೀರು ಸುರಿಸುತ್ತಾ ಹೇಳಿಕೊಂಡಿದ್ದಾನೆ**

ಕೋಮಾ ಸ್ಥಿತಿಯಲ್ಲೂ ಮನಸ್ಸು ಜಾಗ್ರತವಾಗಿರುತ್ತದೆ ಎನ್ನುತ್ತಾರೆ. ಸಾಂತ್ವನದ ಮಾತುಗಳಿಗೆ ಮನಸ್ಸು ಪ್ರತಿಕ್ರಿಯಿಸುತ್ತದೆ, ಕೋಮಾದಿಂದ ಹೊರಬರಲು ಉದ್ದೀಪಿಸುತ್ತದೆ ಎಂಬುದಕ್ಕೆ ಉದಾಹರಣೆಗಳಿವೆ. ಅವನು ಅವಳ ಮಂಚದ ಪಕ್ಕದಲ್ಲೇ ಕುಳಿತು ಅವಳೊಂದಿಗೆ ಸಂಭಾಷಣೆಯಲ್ಲಿ ತೊಡಗಿಕೊಂಡಿದ್ದಾನೆ. ತಾವು ಸಂಧಿಸಿದ ದಿವಸ, ತಾವು ಒಟ್ಟಿಗೆ ಕಳೆದ ಸಂತೋಷದ ದಿನಗಳನ್ನು ಕುರಿತು ಮಾತಾಡಿದ್ದಾನೆ. ಅವಳಿಲ್ಲದೆ ತಾನು ಬದುಕಲಾರೆ ಎಂಬ ಮಾತನ್ನು ಕಣ್ಣೀರು ಸುರಿಸುತ್ತಾ ಹೇಳಿಕೊಂಡಿದ್ದಾನೆ. ಇದಕ್ಕೆಲ್ಲ ಅವಳ ಪ್ರತಿಕ್ರಿಯೆ ಶೂನ್ಯ. ಅವಳೊಂದಿಗೆ ಮಾತಾಡುತ್ತಾ ಅವಳಿಗೆ ಧೈರ್ಯ ತುಂಬಬಹುದಾಗಿದ್ದ ತಂದೆಯಾಗಲಿ ತಾಯಿಯಾಗಲಿ ಅವಳ ಬಳಿ ಇರಲಿಲ್ಲ. ತಂದೆಯನ್ನು ಚಿಕ್ಕಂದಿನಲ್ಲೇ ಕಳೆದುಕೊಂಡಿದ್ದಳು. ಒಡಹುಟ್ಟಿದವರೂ ಯಾರೂ ಇಲ್ಲ. ಇವಳ ಮದುವೆಯ ಕರ್ತವ್ಯವನ್ನು ಪೂರೈಸಿದ ಕೆಲವೇ ತಿಂಗಳಲ್ಲಿ ತಾಯಿಯೂ ಕೊನೆಯುಸಿರೆಳೆದರು. ಅಭಿಯ ವೃದ್ಧ ತಂದೆತಾಯಿ ತಮ್ಮ ಊರಿನಲ್ಲಿದ್ದಾರೆ. ಸೊಸೆಗೆ ಶುಶ್ರೂಷೆ ಮಾಡುವಷ್ಟು ತ್ರಾಣ ಅವರಲ್ಲಿಲ್ಲ. ಅಭಿ ಅವರಿಗೆ ಸುದ್ದಿಯನ್ನು ಮುಟ್ಟಿಸಿಯೇ ಇಲ್ಲ. ಜೀವಚ್ಛವದಂತೆ ಮಲಗಿರುವ ಸಾಕ್ಷಿಯ ಜೊತೆಗೆ ಕಾಲ ಕಳೆಯುವುದು ಅಸಾಧ್ಯ ಎನ್ನಿಸಿದಾಗ ಅವನು ಒಬ್ಬ ನರ್ಸನ್ನು ಗೊತ್ತುಮಾಡಿಕೊಂಡ. ತಾನು ಸಾಕ್ಷಿಗೆ ಹೇಳಬೇಕಾದದ್ದನ್ನು ರೆಕಾರ್ಡ್ ಮಾಡಿ ಅದು ಮೇಲಿಂದ ಮೇಲೆ ಅವಳಿಗೆ ಕೇಳುವಂತೆ ವ್ಯವಸ್ಥೆ ಮಾಡಿದ. ಅವಳಿಗೆ ಪ್ರಿಯವಾದ ಸಂಗೀತದ ತುಣುಕುಗಳನ್ನು ಸೇರಿಸಿದ.

"ನೀನು ಈಗ ನಿನ್ನ ಆರೋಗ್ಯದ ಕಡೆಗೂ ನಿಗಾ ಇಡಬೇಕು, ಅಭಿ. ಊಟ ಸರಿಯಾಗಿ ಮಾಡಬೇಕು. ಮನಃಶಾಂತಿಗಾಗಿ ಧ್ಯಾನ ಮಾಡಬೇಕು. ನಾವು ಒಬ್ಬ ಗುರೂಜಿಯ ಆಶ್ರಮಕ್ಕೆ ಒಮ್ಮೊಮ್ಮೆ ಹೋಗುತ್ತೇವೆ. ನಿನ್ನನ್ನು ಬೇಕಾದರೆ ಕರೆದುಕೊಂಡು ಹೋಗುತ್ತೇನೆ." ಎಂದು ಮಧುರಾ ಕಳಕಳಿಯಿಂದ ಹೇಳಿದಳು.

ಅವನು ಸುಮ್ಮನಿದ್ದ. ಮಧುರಾಳ ಒತ್ತಾಯಕ್ಕೆ ಮಣಿದು ಒಂದೆರಡು ತುತ್ತು ತಿಂದು ಮಜ್ಜಿಗೆ ಕುಡಿದ. ಅವರು ಊಟ ಮುಗಿಸಿ ಒಂದು ರೌಂಡ್ ಸಂಶೋಧನಾಲಯದ ಸುತ್ತಲೂ ಸುತ್ತಿ ಮತ್ತೆ ಲ್ಯಾಬಿಗೆ ಮರಳಿದರು. ಕ್ರಿಸ್ಪರ್ ಲ್ಯಾಬ್ ಎಂಬ ಫಲಕದ ಕೆಳಗೆ "ಡಾ. ಅಭಿರಾಮ್, ಜೆನೆಟಿಕ್ ಇಂಜಿನಿಯರಿಂಗ್ ಸ್ಪೆಷಲಿಸ್ಟ್" ಎಂದು ಬರೆದಿತ್ತು. ಅಮೇರಿಕಾದ ಮೆಸಾಚುಸೆಟ್ಸ್ ರಾಜ್ಯದಲ್ಲಿರುವ ಎಂಐಟಿಯಲ್ಲಿ ಉನ್ನತ ವ್ಯಾಸಂಗ ಪೂರೈಸಿದ ನಂತರ ಅವನು ಭಾರತಕ್ಕೆ ಮರಳಿದಾಗ ಎಷ್ಟೋ ಜನ ಅವನ ನಿರ್ಧಾರವನ್ನು ಪ್ರಶ್ನಿಸಿದರು. ಸ್ವತಃ ಅವನ ಸಂಶೋಧನಾ ಸಲಹೆಗಾರರಾದ ಪ್ರೊ. ಚೆಂಗ್ "ಅಭಿ, ನಿನ್ನಂಥ ಪ್ರತಿಭಾವಂತನನ್ನ ಕಳೆದುಕೊಳ್ಳಲು ನನಗಂತೂ ಇಷ್ಟವಿಲ್ಲ. ನೀನು ನನ್ನ ಲ್ಯಾಬಿನಲ್ಲೇ ಕೆಲಸ ಮಾಡಬಹುದು. ಮಾಡಲು ಬೆಟ್ಟದಷ್ಟು ಕೆಲಸ ಇದೆ. ಕ್ರಿಸ್ಪರ್ ತಂತ್ರಜ್ಞಾನ ಇದೀಗ ಶೈಶವಾವಸ್ಥೆಯಿಂದ ಬಾಲ್ಯಾವಾಸ್ಥೆಗೆ ಬರುತ್ತಿದೆ. ನಿನಗೇ ಗೊತ್ತಿರುವಂತೆ ಈ ತಂತ್ರಜ್ಞಾನದ ಸಾಧ್ಯತೆಗಳು ಅಸಂಖ್ಯ. ಮಾನವಕುಲವನ್ನು ಕ್ಯಾನ್ಸರ್, ಏಡ್ಸ್ ಮುಂತಾದ ಭಯಂಕರ ರೋಗಗಳಿಂದ ಈ ತಂತ್ರಜ್ಞಾನ ರಕ್ಷಿಸಬಹುದು. ಯಾವ ಔಷಧೋಪಚಾರವೂ ಗುಣ ಪಡಿಸದ ವಂಶವಾಹಿ ಕಾಯಿಲೆಗಳಿಂದ ನರಳುವವರಿಗೆ ಇಂದೊಂದು ಆಶಾಕಿರಣವಾಗಿದೆ. ಕೋವಿಡ್ ಮುಂತಾದ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲೂ ಕ್ರಿಸ್ಪರ್ ಅವಕಾಶ ನೀಡುತ್ತೆ. ನಿನ್ನ ಸಂಶೋಧನಾ ಪ್ರಬಂಧವನ್ನು ಎಲ್ಲರೂ ಹೊಗಳುತ್ತಾರೆ. ನಿನಗೆ ಭಾರತದಲ್ಲಿ ಸಂಶೋಧನೆಗೆ ಸೂಕ್ತ ಅವಕಾಶಗಳು ಸಿಕ್ಕುತ್ತವೆಯೇ?" ಎಂದು ಕೇಳಿದರು.

ಕ್ರಿಸ್ಪರ್ ಎಂಬ ಜೀನ್ ತಿದ್ದುಪಡಿ ತಂತ್ರಜ್ಞಾನವು ಜೀವವಿಜ್ಞಾನಿಗಳ

ವರ್ತುಲದಲ್ಲಿ ಸಾಕಷ್ಟು ಚರ್ಚೆಗೆ ಎಡೆಮಾಡಿಕೊಟ್ಟಿತ್ತು. ಪ್ರೊ. ಚೆಂಗ್ ಜೀನ್ ತಿದ್ದುವ ಕ್ಷೇತ್ರದಲ್ಲಿ ಸಾಕಷ್ಟು ಹೆಸರು ಮಾಡಿದ್ದಾರೆ. ಸುಮಾರು ಇಪ್ಪತ್ತು ಜನ ಅವರ ಲ್ಯಾಬಿನಲ್ಲಿ ಕೆಲಸ ಮಾಡುತ್ತಾರೆ. ಅಮೆರಿಕಾದ ನ್ಯಾಷನಲ್ ಸೈನ್ಸ್ ಫೌಂಡೇಷನ್ ಅಲ್ಲದೆ ಅನೇಕ ಖಾಸಗಿ ವೈದ್ಯಕೀಯ ಸಂಸ್ಥೆಗಳು ಮತ್ತು ಔಷಧ ತಯಾರಕರು ಈ ಸಂಶೋಧನೆಗೆ ದೊಡ್ಡ ಮೊತ್ತದ ಅನುದಾನ ನೀಡಿದ್ದಾರೆ. ಸಂಶೋಧನಾಲಯವನ್ನು ನೋಡಲು ಪತ್ರಕರ್ತರು, ಕುತೂಹಲಿಗಳು ಆಗಾಗ ಬರುವುದು ರೂಢಿ. ಅವರಿಗೆ ಸಂಶೋಧನಾಲಯದ ಸುತ್ತುಹಾಕಿಸಿ ಅವರ ಪ್ರಶ್ನೆಗಳಿಗೆ ಸರಳವಾದ ವಿವರಣೆ ನೀಡುವುದು ಪ್ರೊ. ಚೆಂಗ್ ಅವರಿಗೆ ಸಿದ್ಧಿಸಿದ ಕಲೆ.

"ಕ್ರಿಸ್ಪರ್ ತಂತ್ರಜ್ಞಾನವನ್ನು ಅರ್ಥ ಮಾಡಿಕೊಳ್ಳುವುದು ಬಹಳ ಸುಲಭ. ಜೀವಕಣದಲ್ಲಿ ಕ್ರೋಮೊಸೋಮ್ಸ್ ಎಂಬ ನೂಡಲ್ಸ್ ಆಕಾರದ ಭಾಗದಲ್ಲಿ ವಂಶವಾಹಿಗಳು ಇರುತ್ತವೆ. ವಂಶವಾಹಿಗಳ ಸರಮಾಲೆಯಲ್ಲಿ ಜೀವದ ವಂಶದ ಇತಿಹಾಸವೇ ಅಡಗಿದೆ. ಅದು ಯಾವ ಜೀವಜಾತಿ – ಸಸ್ಯವೋ, ಪ್ರಾಣಿಯೋ, ಆನೆಯೋ, ಕುದುರೆಯೋ, ಕೋಳಿಯೋ, ಮನುಷ್ಯನೋ? ಗಂಡೋ ಹೆಣ್ಣೋ? ಚರ್ಮದ ಬಣ್ಣ, ಕೂದಲಿನ ಬಣ್ಣ, ಕಣ್ಣುಗಳ ಬಣ್ಣ, .... ಹೀಗೆ ಪ್ರತಿಯೊಂದೂ ಗುಣದ ನೆನಪಿನ ಕೊಂಡಿಗಳೇ ವ'ಂಶ'ವಾಹಿಗ'ಳ'ು," ಎನ್ನುತ್ತಾ ಪ್ರೊ. ಚೆಂಗ್ ಸ'ಂಶೋಧ'ನಾಲಯ'ದಲ್ಲಿ ಹಾಕಿದ ಬೃಹತ್ ಗಾತ್ರದ ಗ'ೋಡೆಚಿತ್ರ'ಗ'ಳ'ನ್ನು ತೋರಿಸುತ್ತಾರೆ.

"ಜೀವಿಯು ಮುಂದೆ ಹೇಗೆ ವಿಕಸಿತಗೊಳ್ಳುತ್ತದೆ, ಅದು ಯಾವ ರೋಗಗಳಿಗೆ ತುತ್ತಾಗಬಹುದು ಎಂಬ ರಹಸ್ಯ ಕೂಡಾ ವಂಶವಾಹಿಗಳಲ್ಲಿ ಅಡಗಿರುತ್ತದೆ! ಈಗ ಸಂಶೋಧನೆಯಿಂದ ಇಂಥ ರೋಗವು ತಲೆದೋರಲು ಇಂಥದ್ದೇ ವಂಶವಾಹಿಗಳು ಕಾರಣ ಎಂದು ತಿಳಿಯಲು ಸಾಧ್ಯವಾಗಿದೆ. ನಿಮ್ಮ ಮನೆಯಲ್ಲಿರುವ ಟಿವಿ ಸೆಟ್ ಸರಿಯಾಗಿ ಕೆಲಸ ಮಾಡದಿರಲು ಏನು ಕಾರಣ ಎಂದು ತಿಳಿಯುವುದು ಸುಲಭವೇನಲ್ಲ. ಆದರೆ ಹಾಗೆ ತಿಳಿದಾಗ ಅದನ್ನು ಸರಿ ಪಡಿಸಬೇಕೆಂಬ ಒತ್ತಾಸೆ ಸಹಜವೇ ತಾನೇ? ಯಾವ ವಂಶವಾಹಿಯು ಕ್ಯಾನ್ಸರ್ ರೋಗದ ದ್ಯೋತಕ ಎಂದು ತಿಳಿದಮೇಲೆ ಅದನ್ನು ಹೇಗಾದರೂ ತಿದ್ದಬಹುದೇ ಎಂಬ ಕುತೂಹಲ ಸಹಜವೇ. ಜೆನೆಟಿಕ್ ಇಂಜಿನಿಯರಿಂಗ್ ಎಂಬ ಕ್ಷೇತ್ರವೇ ಈಗ ಬೆಳೆದಿದೆ. ಕ್ರಿಮಿಗಳಿಂದ ಉಂಟಾಗುವ ರೋಗಗಳಿಂದ ರಕ್ಷಿಸಿಕೊಳ್ಳುವ ಶಕ್ತಿಯನ್ನು ಗಿಡಗಳಿಗೆ ಕೊಟ್ಟು ಬೆಳೆಯನ್ನು ಹೆಚ್ಚಿಸಬಹುದು. ನಿರ್ದಿಷ್ಟ ವೈಟಮಿನ್ ಪ್ರಮಾಣವು ಹೆಚ್ಚಿರುವಂತೆ ಧಾನ್ಯವನ್ನು ನಿಯಂತ್ರಿಸಬಹುದು." ಈಗ ಪ್ರೊ. ಚೆಂಗ್ ತಮ್ಮ ಲ್ಯಾಬಿನಲ್ಲಿ ಅಭಿವೃದ್ಧಿ ಪಡಿಸಿದ ಕೆಲವು ಬೀಜಗಳನ್ನು ತೋರಿಸುತ್ತಾರೆ. ಅವುಗಳ ಬಿತ್ತನೆಯಿಂದ ಬೆಳೆದ ಕ್ಯಾರೆಟ್, ಟೊಮೇಟೋ ಮುಂತಾದವುಗಳ ಚಿತ್ರಗಳನ್ನು ತೋರಿಸುತ್ತಾರೆ. ವೈಟಮಿನ್ ಎ ಇರುವ ಹೊಂಬಣ್ಣದ ಅಕ್ಕಿಯ ಬಗ್ಗೆ ಹೇಳುತ್ತಾರೆ. ಬಟಾಟೆ ಮತ್ತು ಟೊಮೇಟೊ ಎರಡರ ಗುಣಗಳನ್ನೂ ಹೊಂದಿದ ಪೊಮೆಟೋ ತರಕಾರಿಯ ಬಗ್ಗೆ ಹೇಳುತ್ತಾರೆ.



"ವಂಶವಾಹಿಗಳ ಸರಮಾಲೆಯನ್ನು ತಿದ್ದಲು ಈಗ ಕ್ರಿಸ್ಪರ್–ಕ್ಯಾಸ್ 9 ಎಂಬ ತಂತ್ರಜ್ಞಾನ ಈಗ ಅಭಿವೃದ್ಧಿಯಾಗಿದೆ. ಜೀವಿಗೆ ತಗಲುವ ರೋಗಕ್ಕೆ ಕಾರಣವಾದ ವಂಶವಾಹಿಯನ್ನು ಗುರುತಿಸಬಹುದಾದರೆ ಅದನ್ನು ಕತ್ತರಿಸಿ ಬೇರ್ಪಡಿಸುವುದು ಈಗ ಸಾಧ್ಯ. ಇದನ್ನು ಒಂದು ಮ್ಯಾಜಿಕ್ ಕತ್ತರಿ ಎಂದುಕೊಳ್ಳಿ. ಮುದ್ರಣವಾದ ವಾಕ್ಯದಲ್ಲಿ ಎಲ್ಲೋ ಒಂದುಕಡೆ ತಪ್ಪಾಗಿದೆ ಎಂದುಕೊಳ್ಳಿ. ತಪ್ಪಾದ ಭಾಗವನ್ನು ಗುರುತಿಸಿ ಅಷ್ಟನ್ನು ಮಾತ್ರ ಹುಷಾರಾಗಿ ಕತ್ತರಿಸಬೇಕು. ಮತ್ತು ಆ ಭಾಗದಲ್ಲಿ ಸರಿಯಾದ ಪಾಠವನ್ನು ಸೇರಿಸಬೇಕು. ವಿಧಿಲಿಖಿತ ಎಂದು ಕೈಚೆಲ್ಲಿ ಕೂಡುವ ಅಗತ್ಯವೇ ಮುಂದೆ ಬೀಳಲಾರದು. ಹಣೆಬರಹವನ್ನು ತಿದ್ದಿಕೊಳ್ಳಬಹುದು! ಯೋಚಿಸಿ, ಹುಟ್ಟುವ ಮಗುವಿಗೆ ಅಂಗವೈಕಲ್ಯವಿದ್ದಲ್ಲಿ ಅದನ್ನು ತಿದ್ದಲು ಸಾಧ್ಯವಾದರೆ! ಮಗು ಮುಂದೆ ಭಯಂಕರ ರೋಗಕ್ಕೆ ತುತ್ತಾಗಬಲ್ಲದೇ ಎಂದು ತಿಳಿಯುವ ಮತ್ತು ಮಗುವಿನ ಹಣೆಬರಹವನ್ನು ಲ್ಯಾಬಿನಲ್ಲಿ ತಿದ್ದುವ ತಂತ್ರಜ್ಞಾನ ಈಗ ಅಭಿವೃದ್ಧಿಯಾಗಿದೆ!" ಎಂದು ಪ್ರೊ ಚೆಂಗ್ ನಗುತ್ತಿರುವ ಮಕ್ಕಳ ಚಿತ್ರಗಳನ್ನು ತೋರಿಸುತ್ತಾರೆ. "ಕ್ರಿಸ್ಪರ್ ತಂತ್ರಜ್ಞಾನವನ್ನು ಕುರಿತು ಇಲ್ಲಿ ಇನ್ನೂ ಬೇಕಾದಷ್ಟು ಮಾಹಿತಿ ಇದೆ. ವಿಡಿಯೋ ಚಿತ್ರವಿದೆ. ನೀವೂ ನೋಡಿ, ಇತರರಿಗೂ ತೋರಿಸಿ" ಎಂದು ಅತಿಥಿಗಳಿಗೆ ಆಕರ್ಷಕ ಹೊದ್ದಿಕೆಯ ಕಾಂಪಾಕ್ಟ್ ಡಿಸ್ಕ್ ಉಡುಗೊರೆಯಾಗಿ

---

**ಪ್ರೊ। ಚೆಂಗ್ ಧ್ವನಿ ಅವನ ಕಿವಿಗಳಲ್ಲಿ ಅನುರಣಿಸಿತು. "ವಿಧಿಲಿಖಿತ ಎಂದು ಕೈಚೆಲ್ಲಿ ಕೂಡುವ ಅಗತ್ಯವೇ ಮುಂದೆ ಬೀಳಲಾರದು. ಹಣೆಬರಹವನ್ನು ತಿದ್ದಿಕೊಳ್ಳಬಹುದು!" ಅವನು ಕಣ್ಮುಚ್ಚಿ ಯೋಚನೆಯಲ್ಲಿ ತೊಡಗಿದ. ಅವನ ತಲೆಯಲ್ಲಿ ಒಂದು ಯೋಚನೆ ಹಾದುಹೋಯಿತು. ತನ್ನ ಕಲ್ಪನೆಗೆ ಬೆಚ್ಚಿ ಅವನು ಒಂದೆರಡು ಕ್ಷಣ ದಿಗ್ಭ್ರಮೆಗೊಂಡ. ಇದು ಸಾಧ್ಯವಾಗಬಹುದೇ ಎಂದು ಅವನ ಮನಸ್ಸು ಹೊಯ್ದಾಡಿತು. ಅವನಲ್ಲಿದ್ದ ಸಂಶೋಧಕ ಒಮ್ಮೆಲೇ ಜಾಗ್ರತನಾದ. ಪ್ರಶ್ನೆಗಳು ಪುಂಖಾನುಪುಂಖವಾಗಿ ಅವನ ತಲೆಯಲ್ಲಿ ಮೂಡತೊಡಗಿದವು. ಇದೆಲ್ಲವನ್ನೂ ಮಾಡಲು ತನಗಿರುವ ಕಾಲಾವಕಾಶ ಒಂದೆರಡು ತಿಂಗಳು ಮಾತ್ರ! ಸಾಕ್ಷಿಯ ಸ್ಥಿತಿ ಎಷ್ಟು ನಾಜೂಕಾಗಿದೆ ಎಂದು ಡಾಕ್ಟರ್ ಈಗಾಗಲೇ ಎಚ್ಚರಿಸಿದ್ದಾರೆ.**

---

ನೀಡುತ್ತಾರೆ.

ತನ್ನ ಲ್ಯಾಬ್ ಪ್ರವೇಶಿಸುವಾಗ ಅಭಿಗೆ ಇವೆಲ್ಲ ನೆನಪಾಯಿತು. "ವಿಕ್ಟರ್ (ಪ್ರೊ? ಚೆಂಗ್ ಅವರನ್ನು ವಿದ್ಯಾರ್ಥಿಗಳು ಹೆಸರು ಹಿಡಿದೇ ಕೂಗುತ್ತಿದ್ದರು) ಭಾರತದಲ್ಲೂ ಈಗ ಸಂಶೋಧನೆಗೆ ಸಾಕಷ್ಟು ಪ್ರೋತ್ಸಾಹ ಸಿಕ್ಕುತ್ತಿದೆ. ನಿಮ್ಮಿಂದ ನಾನು ಕಲಿತದ್ದನ್ನು ಭಾರತದಲ್ಲಿ ಪ್ರಯೋಗಿಸುವ ಅವಕಾಶ ನನಗಿದೆ. ಅನೇಕ ಸಂಶೋಧನಾಲಯಗಳಿಗೆ ಬರೆದಿದ್ದೇನೆ. ಅವರಿಂದ ಉತ್ಸಾಹದ ಪ್ರತಿಕ್ರಿಯೆ ದೊರಕಿದೆ. ನಿಮ್ಮ ಆಶೀರ್ವಾದ ನನ್ನೊಡನೆ ಇರಲಿ!" ಎಂದು ಅವನು ಉತ್ತರಿಸಿದಾಗ ಪ್ರೊ। ಚೆಂಗ್ ಅವನ ಭುಜದ ಮೇಲೆ ಕೈಯಿಟ್ಟು ಅಮುಕಿ "ಓಕೆ, ಗುಡ್ ಲಕ್!" ಎಂದು ಮುಗುಳ್ನಕ್ಕಿದ್ದು ನೆನಪಾಯಿತು.

ಅವನು ಲ್ಯಾಬ್ ಪ್ರವೇಶಿಸಿದ. ಅಲ್ಲಿ ತರಬೇತಿಗಾಗಿ ಬಂದಿದ್ದ ವಿದ್ಯಾರ್ಥಿಗಳು ಕೆಲಸ ಮಾಡುತಿದ್ದರು. ಅವನು ತನ್ನ ಚೇಂಬರಿಗೆ ಹೋಗಿ ಮನೆಗೆ ಫೋನ್ ಮಾಡಿದ. ಸಾಕ್ಷಿಯ ಆರೋಗ್ಯ ಯಥಾಸ್ಥಿತಿಯಾಗಿದೆ ಎಂದು ನರ್ಸ್ ತಿಳಿಸಿದಳು. ಅವನಿಗೆ ಸ್ವಲ್ಪ ಸಮಾಧಾನವಾಯಿತು. ನಿದ್ರೆಯಲ್ಲಾದರೂ ಅವಳಿಗೆ ನೋವಿನಿಂದ ತಾತ್ಕಾಲಿಕ ಮುಕ್ತಿ ಮತ್ತು ಒಂದಿಷ್ಟು ಮನಃಶಾಂತಿ ದೊರಕುತ್ತದೆಯೇ ಎಂದು ಅವನು ಪ್ರಶ್ನಿಸಿಕೊಂಡ. ಊರಿನಲ್ಲಿರುವ ಅಪ್ಪನ ಮನೆಗೆ ಫೋನ್ ಮಾಡಿ ಒಂದಿಷ್ಟು ಮಾತಾಡಿದ. ಸಾಕ್ಷಿ ಹೇಗಿದ್ದಾಳೆ, ಅವಳು ಯಾಕೆ ಫೋನ್ ಮಾಡುವುದಿಲ್ಲ ಎಂಬ ಪ್ರಶ್ನೆಗಳಿಗೆ ಏನೋ ಹಾರಿಕೆಯ ಉತ್ತರ ಕೊಟ್ಟ.



ಅವನು ಆಯಾಸದಿಂದ ಕಣ್ಮುಚ್ಚಿದ. ರಾತ್ರಿ ಸರಿಯಾಗಿ ನಿದ್ರೆ ಮಾಡದೆ ಅದೆಷ್ಟು ದಿನಗಳಾದವು! ಮೊನ್ನೆ ಸಾಕ್ಷಿಯ ವೈದ್ಯರು ಹೇಳಿದ್ದನ್ನು ಕೇಳಿ ಅವನಿಗೆ ಕಾಲಿನ ಕೆಳಗಿನ ಭೂಮಿ ಕುಸಿದಂತೆ ಭಾಸವಾಗಿತ್ತು. "ಸಾಕ್ಷಿ ಬದುಕುಳಿಯುವ ಲಕ್ಷಣಗಳು ಕಾಣುತ್ತಿಲ್ಲ. ಅವಳು ಹೆಚ್ಚೆಂದರೆ ಮೂರು ತಿಂಗಳು ಬದುಕಬಹುದು. ನೀವು ಧೈರ್ಯ ತೆಗೆದುಕೊಳ್ಳಬೇಕು. ಮುಂದಿನದನ್ನು ಆಲೋಚಿಸಬೇಕು."

ಅವನ ಕಣ್ಮುಂದೆ ಸಾಕ್ಷಿಯ ಮುಖ ತೇಲಿಬಂತು. ಎಂಐಟಿಯಲ್ಲಿ ತಾವಿಬ್ಬರೂ ಕಳೆದ ಸಂತೋಷದ ದಿನಗಳು ನೆನಪಾದವು. ಅವಳು ಕಂಪ್ಯೂಟರ್ ಇಂಜಿನಿಯರಿಂಗ್ ಕ್ಷೇತ್ರದಲ್ಲಿ ಉನ್ನತ ಪದವಿಗಾಗಿ ಓದುತ್ತಿದ್ದವಳು. ಕೆಫೆಟೇರಿಯಾದಲ್ಲಿ ಅಕಸ್ಮಾತ್ ಆದ ಭೇಟಿ ಪ್ರೇಮಾಂಕುರಕ್ಕೆ ಕಾರಣವಾಯಿತು. ಅವಳು ಮೂಲತಃ ಮಹಾರಾಷ್ಟ್ರದ ಹುಡುಗಿ. ಅವಳನ್ನು ಮದುವೆಯಾಗುವ ಆಸೆಯನ್ನು ತಂದೆತಾಯಿಗೆ ಹೇಳಿದಾಗ ಅದನ್ನು ಅವರು ಸಂತೋಷವಾಗಿಯೇ ಸ್ವೀಕರಿಸಿದರು. ತಾನು ಭಾರತಕ್ಕೆ ಹಿಂದಿರುಗಬೇಕು ಎಂಬ ಆಸೆ ವ್ಯಕ್ತಪಡಿಸಿದಾಗ ಅವಳು ಮರುಮಾತಿಲ್ಲದೆ ಒಪ್ಪಿಕೊಂಡು ತಾನೂ ಬೆಂಗಳೂರಿನಲ್ಲಿ ಕೆಲಸಗಳಿಗೆ ಅರ್ಜಿ ಹಾಕಿಕೊಂಡಳು. ಹೆಣ್ಣುಮಕ್ಕಳೇ ಇಲ್ಲದ ಅವನ ತಾಯಿಗೆ ಸಾಕ್ಷಿ ಮಗಳಾದಳು. ಊರಿಗೆ ಹೋದಾಗ ಅಮ್ಮ ಸಾಕ್ಷಿಗೆ ತಮ್ಮ ಜೀವನಪದ್ಧತಿಯನ್ನೆಲ್ಲಾ ಹೇಳಿಕೊಡುವರು. ಅಭಿಗೆ ಇದು ಇಷ್ಟ, ಎಂದು ಯಾವುದೋ ತಿಂಡಿಗಳನ್ನು ಮಾಡುವ ವಿಧಾನವನ್ನು ಕಲಿಸುವರು. ಮದುವೆಗೆ ಮುಂಚೆಯಾಗಲಿ ಅನಂತರವಾಗಲಿ ತಾವಿಬ್ಬರೂ ಎಂದೂ ಜಗಳವೇ ಆಡಲಿಲ್ಲ. ಕಿನ್ನರಕಥೆಯಂತಿದ್ದ ಜೀವನ ಒಮ್ಮೆಲೇ ನರಕಯಾತನೆಯಾಯಿತು. ಅವಳೇನೋ ಈ ನರಕದಿಂದ ಮುಕ್ತಳಾಗಿ ಹೊರಟುಹೋಗುತ್ತಾಳೆ .... ಯೋಚಿಸುತ್ತಾ ಅವನ ಕಣ್ಣುಗಳು ಮಂಜಾದವು. ಇದನ್ನು ಹಣೆಬರಹ ಎಂದಲ್ಲದೆ ಬೇರೇನು ಅನ್ನಬೇಕು!

ಪ್ರೊ। ಚೆಂಗ್ ಧ್ವನಿ ಅವನ ಕಿವಿಗಳಲ್ಲಿ ಅನುರಣಿಸಿತು. "ವಿಧಿಲಿಖಿತ ಎಂದು ಕೈಚೆಲ್ಲಿ ಕೂಡುವ ಅಗತ್ಯವೇ ಮುಂದೆ ಬೀಳಲಾರದು. ಹಣೆಬರಹವನ್ನು ತಿದ್ದಿಕೊಳ್ಳಬಹುದು!" ಅವನು ಕಣ್ಮುಚ್ಚಿ ಯೋಚನೆಯಲ್ಲಿ ತೊಡಗಿದ. ಅವನ ತಲೆಯಲ್ಲಿ ಒಂದು ಯೋಚನೆ ಹಾದುಹೋಯಿತು. ತನ್ನ ಕಲ್ಪನೆಗೆ ಬೆಚ್ಚಿ ಅವನು ಒಂದೆರಡು ಕ್ಷಣ ದಿಗ್ಭ್ರಮೆಗೊಂಡ. ಇದು ಸಾಧ್ಯವಾಗಬಹುದೇ ಎಂದು ಅವನ ಮನಸ್ಸು ಹೊಯ್ದಾಡಿತು. ಅವನಲ್ಲಿದ್ದ ಸಂಶೋಧಕ ಒಮ್ಮೆಲೇ ಜಾಗ್ರತನಾದ. ಪ್ರಶ್ನೆಗಳು ಪುಂಖಾನುಪುಂಖವಾಗಿ ಅವನ ತಲೆಯಲ್ಲಿ ಮೂಡತೊಡಗಿದವು. ಇದೆಲ್ಲವನ್ನೂ ಮಾಡಲು ತನಗಿರುವ ಕಾಲಾವಕಾಶ ಒಂದೆರಡು ತಿಂಗಳು ಮಾತ್ರ! ಸಾಕ್ಷಿಯ ಸ್ಥಿತಿ ಎಷ್ಟು ನಾಜೂಕಾಗಿದೆ ಎಂದು ಡಾಕ್ಟರ್ ಈಗಾಗಲೇ ಎಚ್ಚರಿಸಿದ್ದಾರೆ. ಅವನು ತನ್ನ ಸಂಶೋಧನಾ ತಂಡದ ಕ್ಷಿಪ್ರ ಸಭೆಯನ್ನು ಕರೆದ.

ಅವನ ಯೋಜನೆಯನ್ನು ಕೇಳಿ ಅವರು ಬೆಚ್ಚಿಬಿದ್ದರು. ಇಂಥದ್ದೊಂದು ಪ್ರಯೋಗ ಎಂದೂ ನಡೆದಿಲ್ಲ.

"ಮೇರಿ ಶೆಲ್ಲಿಯ ಡಾ ವಿಕ್ಟರ್ ಫ್ರಾಂಕಿನ್ ಸ್ಟೀನ್ ನೆನಪಾಗುತ್ತಾನೆ" ಎಂದು ಒಬ್ಬ ವಿದ್ಯಾರ್ಥಿನಿ ನೇರವಾಗಿ ನುಡಿದಳು. "ಇದು ಪ್ರಕೃತಿ ಹಾಕಿದ ಗೆರೆಯನ್ನು ದಾಟುವ ಕೆಲಸ ಅನ್ನಿಸುತ್ತಿದೆ. ಚೈನಾದಲ್ಲಿ ಪ್ರೊ। ಜಿಯಾಂಕ್ವಿ ನಡೆಸಿದ ಪ್ರಯೋಗಗಳಿಗೆ ವಿಜ್ಞಾನಿಗಳು ಸಾಕಷ್ಟು ಆಕ್ಷೇಪ ಎತ್ತಿದ್ದಾರೆ."

"ವಿಜ್ಞಾನ ಮುಂದುವರೆಯುವುದೇ ಹಾಗೆ ಅನ್ನಿಸುತ್ತೆ, ಕುಮುದಿನಿ!" ಎಂದು ಅಭಿ ಉತ್ತರಿಸಿದ. ಅವನ ಧ್ವನಿಯಲ್ಲಿದ್ದ ತೀಕ್ಷ್ಣತೆಯನ್ನು ಎಲ್ಲರೂ ಗಮನಿಸಿದರು.

"ಈ ಪ್ರಾಜೆಕ್ಟ್ ಸಾಧ್ಯಾಸಾಧ್ಯತೆ ಬಗ್ಗೆ ಹೇಳಿ. ಇದನ್ನು ಎಷ್ಟು ದಿವಸದಲ್ಲಿ ಪೂರೈಸಬಹುದು ಹೇಳಿ! ನಿಮಗೆ ಈ ಪ್ರಾಜೆಕ್ಟ್ ಅಸಹಜ ಎನ್ನಿಸಿದರೆ, ನಿಮಗೆ ಆಕ್ಷೇಪಗಳಿದ್ದರೆ ಇದರಲ್ಲಿ ಭಾಗವಹಿಸಬೇಡಿ."

ಒಂದೆರಡು ಕ್ಷಣ ಯಾರೂ ಮಾತಾಡಲಿಲ್ಲ. ಕುಮುದಿನಿಯೂ ಸುಮ್ಮನಿದ್ದಳು. ಸ್ವಲ್ಪ ಹೊತ್ತಿನ ತರುವಾಯ ಕೆಫೆಟೇರಿಯಾದಲ್ಲಿ ಮಧುರಾಳೊಂದಿಗೆ ಕಾಫಿ ಕುಡಿಯುವಾಗ ಅವಳು "ಮಧುರಾ, ಇವತ್ತು ಅಭಿ ಹೇಳಿದ ವಿಷಯದ ಬಗ್ಗೆ ನಿನಗೆ ಏನನ್ನಿಸಿತು? ನಾನು ಮೇರಿ ಶೆಲ್ಲಿಯ ಕಾದಂಬರಿ ಬಗ್ಗೆ ಮಾತಾಡಿದ್ದು ಅಭಿಗೆ ರುಚಿಸಲಿಲ್ಲ ಎನ್ನಿಸಿತು" ಎಂದು ಮಾತು ಪ್ರಾರಂಭಿಸಿದಳು.

"ಅಭಿ ಸಾಕ್ಷಿಯನ್ನು ಎಷ್ಟು ಗಾಢವಾಗಿ ಪ್ರೀತಿಸುತ್ತಾನೆಂದರೆ ಅವಳಿಲ್ಲದ ಜೀವನವನ್ನು ಅವನು ಊಹಿಸಿಕೊಳ್ಳಲಾರ. ಅವಳನ್ನು ಹೇಗಾದರೂ ಮಾಡಿ ಉಳಿಸಿಕೊಳ್ಳುವ ಅವನ ಪ್ರಯತ್ನಕ್ಕೆ ನಾವು ಬೆಂಬಲ ಸೂಚಿಸುವುದೇ ನಮಗಿರುವ ದಾರಿ. ಈ ಪ್ರಾಜೆಕ್ಟ್ ಒಂದು ರಹಸ್ಯ ಕಾರ್ಯಾಚರಣೆಯಾಗಿರಬೇಕು. ಇದು ಸಫಲವಾದರೆ ಒಂದು ಕ್ರಾಂತಿಯನ್ನೇ ಉಂಟುಮಾಡುತ್ತದೆ."

"ಸಫಲವಾಗದೇ ಇದ್ದರೆ?"

"ಈಗಾಗಲೇ ಅಂಧರಿಗೆ ದೃಷ್ಟಿ ನೀಡಲು ಜೀನ್ ರಿಪೇರಿಯ

ಪ್ರಯೋಗ ಮಾಡಲಾಗಿದೆ. ಇದನ್ನು ಅದೇ ಪ್ರಯೋಗದ ಮುಂದುವರೆದ ಭಾಗ ಎಂದುಕೊಳ್ಳಬಹುದು. ರೋಗಿಯ ಕಣ್ಣಿಗೆ ವೈರಾಣು ಇರುವ ದ್ರಾವಣದಲ್ಲಿ ಜೀನ್ ರಿಪೇರಿ ರಾಸಾಯನವನ್ನು ಬೆರೆಸಿ ನೇರವಾಗಿ ಹಾಕಲಾಗುತ್ತೆ. ವೈರಾಣುವಿನಿಂದ ರಕ್ಷಿಸಿಕೊಳ್ಳಲು ಕಣ್ಣಿನ ಜೀವಕೋಶಗಳು ಕಾರ್ಯತತ್ಪರವಾಗುತ್ತವೆ. ಆಗ ಜೀನ್ ರಿಪೇರಿ ದ್ರಾವಣವು ವಂಶವಾಹಿಯಲ್ಲಿರುವ ದೋಷವನ್ನು ಕತ್ತರಿಸಿ ತೆಗೆದು ಸರಿಪಡಿಸುತ್ತವೆ. ಕ್ರಮೇಣ ಜೀವಕೋಶಗಳ ವಿಭಜನೆಯಾದಂತೆ ಕಣ್ಣಿನ ದೃಷ್ಟಿ ಮರಳಿ ಬರುತ್ತದೆ. ಸಾಕ್ಷಿಗಿರುವುದು ಬೆಕ್ಕಿನ ಕಣ್ಣು. ಅವಳ ಕಣ್ಣಿನ ಜೀವಕೋಶಗಳಿಂದ ಕಣ್ಣಿನ ಗುಣಗಳ ವಂಶವಾಹಿಗಳನ್ನು ಬೇರ್ಪಡಿಸಿ ಇನ್ನೊಬ್ಬರ ಕಣ್ಣಿಗೆ ಸೇರಿಸಿ ಇದೇ ರೀತಿ ವಂಶವಾಹಿಗಳನ್ನು ಬದಲಾಯಿಸಿದರೆ ಅವರ ಕಣ್ಣುಗಳು ಕ್ರಮೇಣ ಸಾಕ್ಷಿಯ ಕಣ್ಣುಗಳಂತೆಯೇ ಆಗುತ್ತವೆ. ಅಭಿ ಹೇಳುತ್ತಿರೋದು ಇದೇ ರೀತಿ ಸಾಕ್ಷಿಯ ಧ್ವನಿ, ತಲೆಗೂದಲು, ಅಂಗಸೌಷ್ಟವ ಎಲ್ಲವನ್ನೂ ಇನ್ನೊಬ್ಬರಿಗೆ ದಾನ ಮಾಡುವ ವಿಷಯ. ಹಾಗೆ ಸಾಕ್ಷಿಯ ವ್ಯಕ್ತಿತ್ವವನ್ನು ಅನುದಾನ ಪಡೆಯಲು ಒಬ್ಬರು ಸಿದ್ಧರಾಗಿರಬೇಕು, ಅಷ್ಟೇ."

"ನಾನು ಇದಕ್ಕೆ ಸಿದ್ಧಳಾಗಿದ್ದೇನೆ, ಮಧುರಾ."

"ಏನು?!" ಮಧುರಾ ಹೌಹಾರಿ ಕೇಳಿದಳು.

"ನಾನು ಇದುವರೆಗೂ ಮುಚ್ಚಿಟ್ಟ ವಿಷಯವನ್ನು ನಿನಗೆ ಹೇಳುತ್ತಿದ್ದೇನೆ ಮಧುರಾ. ನಾನು ಅಭಿಯನ್ನು ಗಾಢವಾಗಿ ಪ್ರೀತಿಸುತ್ತೇನೆ. ಅವನನ್ನು ಪಡೆಯಲು ನನಗೆ ಇದಕ್ಕಿಂತ ಒಳ್ಳೆಯ ಮಾರ್ಗ ಬೇರೆ ಯಾವುದಿದೆ?"

* * *

ಕುಮುದಿನಿ ಗಾಢ ನಿದ್ರೆಯಲ್ಲಿದ್ದಾಳೆ. ಅವಳ ಮುಖದ ಮೇಲೆ ಬ್ಯಾಂಡೇಜ್ ಪಟ್ಟಿಗಳನ್ನು ಕಟ್ಟಲಾಗಿದೆ. ಕಳೆದ ತಿಂಗಳಿನಿಂದ ಇಡೀ ಸಂಶೋಧನಾ ತಂಡವು ಅವಳ ವಂಶವಾಹಿಗಳ ಮರುಸೃಷ್ಟಿಯಲ್ಲಿ ತೊಡಗಿವೆ. "ತನಗೆ ಏನೇ ಆದರೂ ತಾನೇ ಜವಾಬ್ದಾರಳು" ಎಂಬ ಪತ್ರಕ್ಕೆ ಕುಮುದಿನಿ ಸಹಿ ಹಾಕಿ ಪ್ರಯೋಗಕ್ಕೆ ತನ್ನನ್ನು ತಾನೇ ಅರ್ಪಿಸಿಕೊಂಡಿದ್ದಾಳೆ. ಅಭಿ ಹಗಲಿರುಳೂ ದುಡಿಯುತ್ತಿದ್ದಾನೆ. ಪ್ರತಿದಿನವೂ ಕುಮುದಿನಿಯ ಮೇಲೆ ಅನೇಕಾನೇಕ ಪರೀಕ್ಷೆಗಳನ್ನು ನಡೆಸಿ ಅವಳ ಆರೋಗ್ಯದ ಮೇಲೆ ನಿಗಾ ಇಡಲಾಗಿದೆ. ಅವಳು ಉತ್ತಮ ರೀತಿಯಲ್ಲಿ ಪ್ರತಿಕ್ರಯಿಸುತ್ತಿದ್ದಾಳೆ. ಇಡೀ ತಂಡವು ಇದರಿಂದ ಉತ್ಸಾಹದಲ್ಲಿದೆ. ಇಂದು ಕುಮುದಿನಿಯ ಕಣ್ಣಿಗೆ ಮತ್ತು ತಲೆಗೆ ಕಟ್ಟಲಾದ ಪಟ್ಟಿಗಳನ್ನು ಬಿಚ್ಚಲಾಗುತ್ತದೆ. ಅವಳಿಗೆ ಕಣ್ಣುಬಿಟ್ಟು ನೋಡಲು ಮತ್ತು ಮಾತಾಡಲು ತಿಂಗಳಲ್ಲಿ ಇದೇ ಮೊದಲಬಾರಿಗೆ ಅವಕಾಶ ಸಿಕ್ಕಲಿದೆ.

ಅವಳ ಕಣ್ಣಿನ ಪಟ್ಟಿಯನ್ನು ಬಿಚ್ಚುವಾಗ ಅಭಿಯ ಕೈಗಳು ನಡುಗುತ್ತಿವೆ. ಕಣ್ಣಿಗೆ ಟಾರ್ಚ್ ಹಾಕಿ ನೋಡುವಾಗ ಅವನ ಎದೆ ಹೊಡೆದುಕೊಳ್ಳುತ್ತಿದೆ.

"ನಿಧಾನವಾಗಿ ಕಣ್ಣು ತೆರೆಯಬೇಕು" ಎಂದು ಅಭಿ ಸೂಚನೆ ನೀಡುತ್ತಾನೆ.

ಅವಳ ಕಣ್ಣಿನ ಪಾಪೆಯಲ್ಲಿ ಕಾಣುತ್ತಿರುವ ನಸುಹಸಿರು ಬಣ್ಣವನ್ನು ನೋಡಿ ಅವನು ಅತ್ಯುತ್ಸಾಹದಿಂದ "ವಾವ್! ನಾವು ಯಶಸ್ವಿಯಾದೆವು! ಕುಮುದಿನಿ, ಕಣ್ಣುಗಳ ದೃಷ್ಟಿ ಸರಿಯಾಗಿದೆ ತಾನೇ?" ಎಂದು ಕೇಳುತ್ತಾನೆ.

ಕುಮುದಿನಿ ಕ್ಷೀಣವಾಗಿ ನಕ್ಕು ಹೆಬ್ಬೆಟ್ಟನ್ನು ಮೇಲೆತ್ತಿ ವಿಜಯದ ಸನ್ನೆ ಮಾಡುತ್ತಾಳೆ.

"ಈಗ ನಿನ್ನ ತಲೆಗೆ ಕಟ್ಟಿದ ಪಟ್ಟಿಯನ್ನು ಬಿಚ್ಚುತ್ತೇನೆ, ಆಯಿತಾ? ಅದಾದ ನಂತರ ಹಾಕಿದ ಟೇಪ್ ತೆಗೆದು ಕುಡಿಯಲು ನೀರು ಕೊಡುತ್ತೇನೆ. ನೀನು ಮಾತಾಡಬಹುದು."

ಕುಮುದಿನಿ ಮತ್ತೊಮ್ಮೆ ಥಂಬ್ಸ್ ಅಪ್ ಸನ್ನೆ ಮಾಡುತ್ತಾಳೆ.

ತಲೆಗೆ ಕಟ್ಟಿದ ಬ್ಯಾಂಡೇಜ್ ಬಟ್ಟೆಯನ್ನು ಅಭಿ ಸುರುಳಿ ಸುರುಳಿಯಾಗಿ ಬಿಚ್ಚುತ್ತಾನೆ. ತಿಂಗಳ ಹಿಂದೆ ಚಿಕಿತ್ಸೆಗೆ ಅನುಕೂಲವಾಗುವಂತೆ ಅವಳ ಕೇಶವನ್ನು ಸಂಪೂರ್ಣವಾಗಿ ತೆಗೆದುಹಾಕಲಾಗಿತ್ತು. ಅಭಿ ಪಟ್ಟಿಯನ್ನು ತೆಗೆದಾಗ ಗುಂಗುರು ಕೂದಲುಗಳ ಸುಳಿ ಕಾಣಿಸಿತು. ಸಾಕ್ಷಿಯ ಗುಂಗುರು ಕೂದಲುಗಳನ್ನೇ ನೋಡಿದಂತೆ ಅಭಿಗೆ ಭಾಸವಾಯಿತು. ಅಲ್ಲಿ ನೆರೆದ ತಂಡದವರು ಹರ್ಷೋದ್ಗಾರ ಮಾಡಿದರು. ಕುಮುದಿನಿಯ ತುಟಿಗಳ ಮೇಲೆ ಹಾಕಲಾಗಿದ್ದ ಟೇಪ್ ನಿಧಾನವಾಗಿ ತೆಗೆದು ಅವಳಿಗೆ ಕುಡಿಯಲು ನೀರಿನ ಲೋಟವನ್ನು ಅಭಿ ಮುಂದೆ ಮಾಡಿದ. ಅವಳು ನೀರು ಗುಟುಕರಿಸಿ "ಅಭಿ! ಕನ್ನಡಿ ಕೊಟ್ಟರೆ ನಾನೂ ನನ್ನ ರೂಪ ನೋಡಿಕೊಳ್ಳುತ್ತೇನೆ" ಎಂದು ಮೆಲ್ಲಗೆ ನುಡಿದಳು. ಅವಳ ಧ್ವನಿಯಲ್ಲಿ ಮುಂಚಿನ ಗಡಸುತನ ಮಾಯವಾಗಿತ್ತು. ಅವಳ ಧ್ವನಿ ಈಗ ಸಾಕ್ಷಿಯ ಮಂಜುಳವಾಣಿಯನ್ನೇ ಹೋಲುತಿತ್ತು. ಎಲ್ಲರೂ ಮತ್ತೊಮ್ಮೆ ಹರ್ಷೋದ್ಗಾರ ಮಾಡುತ್ತದೆ.

**ತಲೆಗೆ ಕಟ್ಟಿದ ಬ್ಯಾಂಡೇಜ್ ಬಟ್ಟೆಯನ್ನು ಅಭಿ ಸುರುಳಿ ಸುರುಳಿಯಾಗಿ ಬಿಚ್ಚುತ್ತಾನೆ. ತಿಂಗಳ ಹಿಂದೆ ಚಿಕಿತ್ಸೆಗೆ ಅನುಕೂಲವಾಗುವಂತೆ ಅವಳ ಕೇಶವನ್ನು ಸಂಪೂರ್ಣವಾಗಿ ತೆಗೆದುಹಾಕಲಾಗಿತ್ತು. ಅಭಿ ಪಟ್ಟಿಯನ್ನು ತೆಗೆದಾಗ ಗುಂಗುರು ಕೂದಲುಗಳ ಸುಳಿ ಕಾಣಿಸಿತು. ಸಾಕ್ಷಿಯ ಗುಂಗುರು ಕೂದಲುಗಳನ್ನೇ ನೋಡಿದಂತೆ ಅಭಿಗೆ ಭಾಸವಾಯಿತು. ಅಲ್ಲಿ ನೆರೆದ ತಂಡದವರು ಹರ್ಷೋದ್ಗಾರ ಮಾಡಿದರು.**

"ಅವಳನ್ನು ಇನ್ನೂ ಕುಮುದಿನಿ ಎಂದೇ ಕರೆಯುತ್ತಿದ್ದೀಯಲ್ಲ, ಅಭಿ ..." ಎಂದು ಮಧುರಾ ಹಾಸ್ಯ ಮಾಡಿದಳು.

"ಅವಳು ಸಾಕ್ಷಿಯೇ ಎಂದು ಒಪ್ಪಿಕೊಳ್ಳುವುದು ಇಬ್ಬರಿಗೂ ಅಷ್ಟು ಸುಲಭವಲ್ಲ. ಮನಃಶಾಸ್ತ್ರಜ್ಞರಿಂದ ಇದಕ್ಕೆ ತರಬೇತಿ ಬೇಕಾಗುತ್ತದೆ" ಎಂದು ಡಾ. ಮನೋಜ್ ಹೇಳುತ್ತಿರುವಾಗ ಅಭಿ ಮತ್ತು ಕುಮುದಿನಿ ಪರಸ್ಪರ ನೋಡಿದರು. ಕುಮುದಿನಿಯ ಕಣ್ಣುಗಳು ಅಪ್ರಯತ್ನಪೂರ್ವಕವಾಗಿ ಕೆಳಗೆ ನೋಡಿದವು. ಅವಳ ಕೆನ್ನೆಗಳಲ್ಲಿ ಗುಳಿಗಳು ಬಿದ್ದು ಸಾಕ್ಷಿಯನ್ನು ನೆನಪಿಸಿದವು. ಅಭಿಗೆ ಒಂದು ಕ್ಷಣ ಏನೂ ಹೇಳಲು ತೋಚಲಿಲ್ಲ. ಅವನು ಆಪರೇಷನ್ ಥಿಯೇಟರಿನಿಂದ ಹೊರಗೆ ಬಂದ. ಅವನ ಹೆಜ್ಜೆಯಲ್ಲಿ ಇತ್ತೀಚೆಗೆ ಕಾಣೆಯಾಗಿದ್ದ ಗೆಲುವು ಮತ್ತೆ ಇಣುಕಿತು.

ಕೈಗಳನ್ನು ತೊಳೆದುಕೊಂಡು ಅವನು ತನ್ನ ಚೇಂಬರಿಗೆ ಬಂದ. ಮೊಬೈಲ್ ಫೋನಿನಲ್ಲಿ ಮೂರು ಮಿಸ್ಡ್ ಕಾಲ್ಸ್ ಬಂದಿದ್ದನ್ನು ಗಮನಿಸಿದ. ಒಂದು ಮನೆಯ ಸಂಖ್ಯೆಯಿಂದ. ಇನ್ನೆರಡು ಸಾಕ್ಷಿಯನ್ನು ನೋಡಿಕೊಳ್ಳುತ್ತಿದ್ದ ವೈದ್ಯರಿಂದ. ಅವನು ಮನೆಗೆ ಹೋಗದೆ ಈಗ ತಿಂಗಳೇ ಆಗಿತ್ತು. ಲ್ಯಾಬಿನಲ್ಲೇ ರಾತ್ರಿಯೂ ಕಳೆಯುತ್ತಿತ್ತು. ನಡುಗುವ ಕೈಗಳಿಂದ ಅಭಿ ಡಯಲ್ ಮಾಡಿದ. ವೈದ್ಯರು ಅತ್ಯುತ್ಸಾಹದಿಂದ ಮಾತಾಡಿದರು.

"ಓ! ಡಾ ಅಭಿರಾಮ್! ನಿಮಗೆ ಎರಡು ಸಲ ಕಾಲ್ ಮಾಡಿದ್ದೆ. ಇವತ್ತು ಒಂದು ಪವಾಡ ನಡೆದಿದೆ. ವಿಧಿಬರಹ ಅನ್ನೋದು ಇದೇ ಇರಬೇಕು. ಸಾಕ್ಷಿಯ ಕೇಸನ್ನು ನಾವು ವೈದ್ಯರು ಹೋಪ್ ಲೆಸ್ ಎಂದು ತಳ್ಳಿಹಾಕಿದ್ದೆವಲ್ಲ. ನಮ್ಮ ಎಲ್ಲಾ ನಿರೀಕ್ಷೆಯನ್ನು ಮೀರಿ ಅವರು ಕೋಮಾದಿಂದ ಹೊರಗೆ ಬಂದಿದ್ದಾರೆ. ಇವತ್ತು ಬೆಳಗ್ಗೆ ನರ್ಸ್ ಫೋನ್ ಮಾಡಿ ನನಗೆ ತಿಳಿಸಿದಳು. ನಾನು ಕೂಡಲೇ ಅವರನ್ನು ನೋಡಿಕೊಂಡು ಬಂದೆ. ಅವರ ಮಾನಸಿಕ ಸ್ಥಿತಿ ಮತ್ತು ತಿಳಿವಳಿಕೆ ಕೂಡಾ ಸರಿಯಾಗಿವೆ. ನನ್ನೊಂದಿಗೆ ಮಾತಾಡಿ ನಿಮ್ಮನ್ನು ಕೇಳಿದರು. ನಿಮಗೆ ಅಭಿನಂದನೆಗಳು!"

*ಡಾ.ಸಿ.ಪಿ.ರವಿಕುಮಾರ್, ಟೆಕ್ಸಸ್ ಇನ್ಸ್ಟ್ರುಮೆಂಟ್ಸ್ ಸಂಸ್ಥೆಯಲ್ಲಿ ಹಿರಿಯ ತಂತ್ರಜ್ಞರು. ಕಥೆ, ಕವನ, ಚುಟುಕು,ವಿಜ್ಞಾನ ಬರಹಗಳು ಹಾಗೂ ಅನುವಾದ ಇವರ ಹವ್ಯಾಸ.*



# ಅಂಕಂಗುಡು

● ನಾರಾಯಣ ಬಾಬಾನಗರ

ಚಿತ್ರ: ಸುಷ್ಮಾ ಶಾಲೀನಿ

ಹೊತ್ತುಹೊಂಟ ಕೂಡಲೇ ಬರಲಾಕಲೇಬೇಕಂತ ಒಂದು ವಾರದಿಂದ ಹೇಳ್ಕೋತ ಬಂದೀನಿ. ಅಟ್ಟಾದರೂ ಈ ಆಸಾಮಿ ಪತ್ತೆ ಇಲ್ಲ. ಸಣ್ಣ ಮಾಲಕರು ಬಂದು ಕೇಳಿದರೆ ಏನು ಹೇಳಬೇಕು?.ಹಗಲೆಲ್ಲಾ ಹಿಂಗ ಮಾಡತಾನ ಮಾರಾಯ. ಯಾರೊ ಸಾಹೇಬ್ರು ಬರ್ತಾರಂತ, ಅವರನ್ನು ಕರೀಲಾಕ ಗುಡ್ಡದ ತುದಿಗೆ ಹೋಗಬೇಕು. ತ್ವಾಟಕ್ಕ ಹೋಗಿ ಬದನೀಕಾಯಿ ಹರಕೊಂಡು, ಚಂದನಬಟ್ಟ ಪಲ್ಯಾ ಕಿತ್ತಕೊಂಡು ಬರಬೇಕು. ಕುತೀಗಿ ಮಟಾ ಕೆಲಸ ". ಕಾರಕೂನ ಶರಣಪ್ಪ ಚಡಪಡಿಸುತ್ತಾ ಗೊಣಗುತ್ತಿದ್ದ. ಅಷ್ಟರಲ್ಲಿಯೇ ಪರಸಪ್ಪ ಕುಂಟಕೋತ ಬಂದ. " ಮಂಜಾಳ ಹೋಗ್ಲಿ! ಏನ ಮಾಡಕೊಂಡಿಯೊ? ಐನ್ ಟೈಮಿನಾಗ ಏನರೇ ಗದ್ದಲಾ ಮಾಡೇ ಇರ್ತಿ ".. ಮತ್ತಿಷ್ಟು ಚಡಪಡಿಸಿದ. " ಕಾರಕೂನರ ಏನೂ ಗಾಬರಿಯಾಗಬ್ಯಾಡ್ರಿ..ಬರೂ ಅವಸರದಾಗ ಜರಾ ಎಡವಿದೆ. ಕಾಲಿಗೆ ರಗತ ಬಂತು. ಅಲ್ಲೇ ಗಾಯಮಾರಿ ಗಿಡದ ತಪ್ಪಲ ಇತ್ತು. ರಸಾ ಹಿಂಡಕೊಂಡೆ..ಏನೂ ಆಗಿಲ್ಲ. ಮುಂದಿನ ಕೆಲಸ ಮಾಡೂನು ನಡೀರಿ.." " ಆತ ,ಆತ ನಡಿ. ನೀ ತ್ವಾಟಕ್ಕ ಹೋಗು. ನಾನು ಗುಡ್ಡದ ತುದೀಗೆ ಹೋಗಿ ಬರ್ತೀನಿ. ಸಾಹೇಬ್ರನ್ನ ಕರಕೊಂಡು ಬರಬೇಕು " ಇಬ್ಬರೂ ಹೊರಡಲು ಅನುವಾಗುವದರಾಗ ಅಜೀತ ಬಂದ. " ನಮಸ್ಕಾರೀ ಸಣ್ಣ ಮಾಲಕರ..ಸಾಹೇಬರನ್ನು ಕರಕೊಂಡು ಬರಲಾಕ ಹೋಗುನ್ರೀ?" ಎಂದ ಕಾರಕೂನ. " ಇನ್ನೂ ಹೋಗಿಯೇ ಇಲ್ಲ ನೀನು?. ಬರೂ ಸಾಹೇಬರು ದೊಡ್ಡ ವಿಜ್ಞಾನಿ ಅದಾರ. ನೀ ಉಪದ್ವ್ಯಾಪಿ ಮಾತಾಡಲಾಕ ಹೋಗಬ್ಯಾಡ. ನೀ ಆತು, ನಿನ್ನ ಕೆಲಸ ಆತು. ಹಂಗ ಇರಬೇಕು" ಅಂದ ಅಜೀತನ ಮಾತಿಗೆ , ಕಾರಕೂನ ತಲೆ ಅಲ್ಲಾಡಿಸಿ ಹೊರಟ.

ಕಾರಕೂನ ಗುಡ್ಡದ ತುದಿಗೆ ಹೋಗಿ,ಉಸ್ಸಪ್ಪಾ ಅಂತ ಸುಧಾರಿಸಿಕೊಳ್ಳುವುದರಾಗ ಭರ್ ಅಂತ ಕಾರು ಬಂದೇ ಬಿಟ್ಟಿತು. ಎಬ್ಬಿಸಿದ ಧೂಳನ್ನು ಹೆಗಲ ಮ್ಯಾಲಿದ್ದ ಟಾವೇಲಿನಿಂದ ಜಾಡಿಸಿಕೊಂಡು, ಕಣ್ಣು ತಿಕ್ಕೋತ ನಿಂತಾಗ..ಕಾರು ಬಂದು ಬರೋಬ್ಬರಿ ಶರಣಪ್ಪನ ಮುಂದೇನೇ ನಿಂತಿತು. ಕಾರಿನ ಬಾಗಿಲು ನಿಧಾನಕ್ಕ ತೆರೆದುಕೊಂಡಿತು. " ಹೇ! ಶರಣಪ್ಪೋರ ಆರಾಮ ಅದೀರಿ? " ಅಂತ ಬಾಗಿಲು ತೆಗೆದ ವ್ಯಕ್ತಿ ಅಂದ. ಶರಣಪ್ಪನಿಗೆ ಇವರ್ಯಾರು? ಅಂತಲೇ ಗೊತ್ತಾಗದೇ " ಹೇ..ಹೇ..ಆರಾಮದೀನ್ರಿ. ದೊಡ್ಡ ಸಾಹೇಬರು ಬರಾವರಿದ್ದರು, ಅವರ ಹಾದಿ ನೋಡಾಕತ್ತಿದ್ದ್ನೀ..ಮತ್ತ ಭೇಟಿಯಾಗೂಣಂತ, ನೀವು ನಡೀರಿ " ದೇಶಾವರಿಯ ನಗೆ ನಗುತ್ತಾ ಶರಣಪ್ಪ ಸಾಗು ಹಾಕಲು ಹವಣಿಸಿದ. " ಅರೇ! ಅಜೀತ ನಿಮ್ಮನ್ನು ಕಳಿಸಿದ್ದು ನನಗೆ ಗೊತ್ತದರೀ..ಕಾರು ಹತ್ತರೀ. ಹೋಗುಣಂತ " ಕಾರಿನಲ್ಲಿಯೇ ಕುಳಿತು ರಮಾಕಾಂತ ಅವಸರಿಸಿದ. ಶರಣಪ್ಪ ಹೌಹಾರೀ , ದೊಡ್ಡ ಸಾಹೇಬರು ಬರತಾರಂತ ಹೇಳ್ಯಾರ. ಇವರು ನೋಡಿದರ, ಶರಣಪ್ಪ ಅಂತ ಮನ್ಯಾನ ಮನುಷ್ಯಾ ಮಾತಾಡಿದಾಂಗ ಮಾತಾಡಕತ್ತಾರ..ಇವರನ್ನೇ ಕರಕೊಂಡು ಬರಾಕ ಹೇಳ್ಯಾರೊ? ಏನು ಮತ್ತೊಬ್ಬರು ಬರ್ತಾರೋ? ಒಂದೂ ಗೊತ್ತಾಗವಲ್ಲದಲ್ಲಪಾ ಸಿವನ ..ಅಂತ ಕೈ ಹಿಚಕೋತ ಶರಣಪ್ಪ ನಿಂತಲ್ಲಿಯೇ ನಿಂತ. " ಏ ಮಾರಾಯಾ..ಏನು ವಿಚಾರ ಮಾಡಕೋತ ನಿಂತಿ? ನೀ ಯಾರಿಗಾಗಿ ಕಾಯಾಕತ್ತಿದ್ದೆಯೊ.. ಅವನೇ ನಾನು. ಮೊದಲು ಕಾರು ಹತ್ತು". " ಏ..ಇರಲ್ರಿ ಸಾಹೇಬರ. ನಿಮ್ಮ ಕಾರಿನ ಗೂಡಾ ಓಡಕೋತ ಬರ್ತೀನ್ರಿ. ಕಾರಿನ್ಯಾಗ ಬ್ಯಾಡ್ರಿ" ಸಂಕೋಚದ ಮುದ್ದೆಯಾಗಿ ಶರಣಪ್ಪ ಹೇಳಿದ. " ಹೇ ಅದಕ್ಯಾಕ ಹಿಂಗಂತೀ ಶರಣಪ್ಪ? ನಾನೂ ನಿಮ್ಮ ಬಾಜೂಕಿನ ಊರಿನವಾ ಅದೀನಿ. ಹತ್ತ..ಹತ್ತ ಕಾರು ಹತ್ತ". ಶರಣಪ್ಪ " ಹಂಗಾದರ ನಮ್ಮೂರಾವ್ರೇ ಆದರಿ " ಊರಗಲ ಮುಖಾ ಮಾಡಿ, ಟಣ್ಣಂತ ಕಾರಿನಾಗ ಹತ್ತಿ, ಎದೆ ಉಬ್ಬಿಸಿ ಕೂತಾ . ನಿಧಾನಕ್ಕ ರಮಾಕಾಂತ ಯೂರೋಪಿನಾಗ ತನ್ನ ರಿಸರ್ಚ್ ಲ್ಯಾಬಿನೊಳಗಿದ್ದವರಿಗೆ ಕುಳ್ಳ ಹೆಂಗ ತಯಾರಿಸುವುದು ಎಂಬುದನ್ನು ಸ್ವಾರಸ್ಯಕರವಾಗಿ ಹೇಳಿದ್ದರ ಬಗ್ಗೆ ಶರಣಪ್ಪನ ಮುಂದ ಹೇಳಿದ. ಶರಣಪ್ಪಗ ನಗೂ ತಡಿಲಾರದೇ ಖೊಳ್ ಎಂದು ಇಷ್ಟಗಲ ಬಾಯಿ ಮಾಡಿ ನಗಲಾಕತ್ತಾಗ.. ಕಾರಿನ ಮುಂದ ಅಜೀತ ನಿಂತಿದ್ದ. ಮನೆ ಮುಂದ ಕಾರು ನಿಂತಿತು. ಯಾವಾಗ ಅಜೀತ ನೋಡಿದನೊ ಪಟ್ಟಂತ ಬಾಯಿ ಮುಚ್ಚಿ ಸುಮ್ಮನಾಗಿಬಿಟ್ಟ. " ಏನೋ ಕಾರಬಾರ ಮಾಡಕೊಂಡ ಬಂದೀಲಾ? " ಅಜೀತನ ಪ್ರಶ್ನೆಗೆ ಶರಣಪ್ಪ ಉತ್ತರಿಸಬೇಕು ಅನೂದರಾಗ ,ರಮಾಕಾಂತ " ಅಜೀತ ನಾನ ಅವನನ್ನ ಮಾತಾಡಿಸ್ಕೋತ ಬಂದೆ. ಏನೂ ಆಗಿಲ್ಲ ನಡಿ ". " ಹಂಗಾದರ ಸರಿ ಆತು ಬಿಡು. ಬಾ..ಬಾ ಒಳಗ ಬಾ. ಊಟಾ ಮಾಡ್ತಿಯೊ? ಏನಾದರೂ ನಾಷ್ಟಾ ಮಾಡ್ತಿಯೊ?" " ಊಟಾನಾ ಮಾಡಿ ಬಿಡೋಣ. ಮೋಕಳೀಕ ಆಗಿಬಿಡತದ" ರಮಾಕಾಂತನ ಮಾತಿಗೆ

ಅಜೀತ ನಕ್ಕ. " ಯೂರೋಪಿಗೆ ಹೋದರೂ ನಮ್ಮೂರ ಭಾಷೆ ಮರತಿಲ್ಲ ನೋಡು ನೀ" " ಅದನ್ನೆಂಗ ಮರೀಲಾಕ ಆಗತೈತಿ? ನಡಿ..ನಡಿ..ಹತ್ತರಕಿ ಪಲ್ಲೆ ತರಸಿಲ್ಲಪಾ? ಅದನ್ನ ತಿಂದು ಎಷ್ಟು ವರ್ಷ ಆದೂನೊ ಏನ ಸುದ್ದಿ?" ರಮಾಕಾಂತನ ಮಾತಿಗೆ ಅಜೀತ ಮತ್ತೆ ನಕ್ಕ.

ಊಟಕ್ಕೆ ಕೂತಾಗ ರಮಾಕಾಂತ ಸವಿಸ್ತಾರವಾಗಿ ತನ್ನ ರಿಸರ್ಚ್ ಮತ್ತು ಕೆಲಸದ ಬಗ್ಗೆ ವಿವರಿಸಿದ. ಕೋಣೆಯಲ್ಲಿ ಕೂತು ತನ್ನ ಬ್ಯಾಗಿನಿಂದ ಮಾನಿಟರ್ ,ವಾಯರ್ ಗಳು, ಇಲೆಕ್ಟ್ರಾನಿಕ್ಸ್ ಸಾಮಗ್ರಿ ಏನೇನೊ ಹೊರತೆಗೆದು ಹರಡಿಕೊಂಡು ಕೂತ. ಶರಣಪ್ಪ ಬಾಯಿ ತಕ್ಕೊಂಡು ಅದನ್ನೆಲ್ಲ ನೋಡ್ಕೋತ ನಿಂತಿದ್ದ. ಇದ್ದಕ್ಕಿದ್ದಂತೆ ರಮಾಕಾಂತ " ಅಜೀತ ನಿನ್ನ ಶರ್ಟ್ ಬಿಚ್ಚು" ಅಂತ ಹೇಳಿ, ಅವನ ಬೆನ್ನಿಗೆ ಕೆಲವೊಂದು ವಾಯರ್ ಗಳನ್ನು ಹಚ್ಚಲು ಬಂದ. ಆಗ ಶರಣಪ್ಪ " ಹೇ..ನಮ್ಮ ಮಾಲಕರಿಗೆ ಏನರ ಮಾಡಿ ಬಿಟ್ಟೀರಿ..ಬಿಡ್ರಿ " ಅಂದ. ಅಜೀತ ನಸುನಕ್ಕು " ಶರಣಪ್ಪ ಇದೆಲ್ಲ ನನಗೆ ಗೊತ್ತಿದೆ. ಏನೂ ಆಗಲ್ಲ ಸುಮ್ಮನಿರು" ಎಂದು ಸುಮ್ಮನಾಗಿಸಿದ. ರಮಾಕಾಂತ ಬಾಟಲಿಯಿಂದ ಯಾವುದೊ ಒಂದು ದ್ರವವನ್ನು ಅಜೀತನಿಗೆ ಕುಡಿಸಿ ಮಾನಿಟರ್ ಆನ್ ಮಾಡಿದ.ಮಾನಿಟರ್ ದಲ್ಲಿ ಎಲ್ಲವೂ ಕಾಣತೊಡಗಿತು. ದ್ರವ ದೇಹದೊಳಗೆ ಹೋಗಿ ಒಂದು ಕಡೆಗೆ ಹೋಗಿ ನಿಂತಿತು. " ಅಜೀತ ಇದೇ ನ್ಯೂಕ್ಲಿಯೋಟೈಡ್ ಸರಣಿ. ಏನೇನು ಲಕ್ಷಣಗಳನ್ನು ಇದು ಉಂಟು ಮಾಡುತ್ತಿದೆ ಎಂದು ತೋರಿಸುತ್ತದೆ ನೋಡು. ಈಗ ನಿನಗೆ ಇದ್ದಕ್ಕಿದ್ದಂತೆ ಬೆಕ್ಕಿನಲ್ಲಿರುವಂತಹ ಕಣ್ಣುಗಳು ಬೇಕೆನಿಸಿದರೆ ಸಾಕು. ಈ ನ್ಯೂಕ್ಲಿಯೋಟೈಡ್ ಗಳನ್ನು ಮರು ಜೋಡಿಸಿದರೆ ಸಾಕು. ನಿನಗೆ ಏನೇನು ಬೇಕು..ಅವೆಲ್ಲ ಸಾಧ್ಯ. ಇದನ್ನೆಲ್ಲ ನಾನೀಗ ವರ್ಕೌಟ್ ಮಾಡಿ ಯಶಸ್ವಿಯಾಗಿರುವೆ " ಶರಣಪ್ಪ ಕಣ್ಣು ಅಗಲಿಸಿ ನೋಡತಾ ಇದ್ದ.." ನನ್ನ ತಮ್ಮನ ಮಗ ಬುದ್ದಿಮಾಂದ್ಯ ಇಂಚಿಂಚೂ ಗೊತ್ತಾದವರಿ " ಎನ್ನುತ್ತಿದ್ದಂತೆಯೇ ಅಜೀತನೂ ಅದಕ್ಕೆ ಸಹಮತಿ ವ್ಯಕ್ತಪಡಿಸಿದ. ಎಲ್ಲರೂ ಬೋರಂಗಿ ನಿಂಗನ ಮನೆಯತ್ತ ಹೆಜ್ಜೆ ಹಾಕಿದರು. ಮನೆಯ ಅಂಗಳದಾಗ ನೂರಾರು ಬೋರಂಗಿಗಳನ್ನು ಹರಡಿಕೊಂಡು ನಿಂಗ ಕೂತಿದ್ದ. ಎಣ್ಣಿ ಬೋರಂಗಿ, ನಗಾರಿ ಬೋರಂಗಿ, ಕುಡ್ಡಿ ಬೋರಂಗಿ ಹೀಗೆ ಕೆಲವೇ ಬೋರಂಗಿಗಳನ್ನು ಕಂಡಿದ್ದ ಅಜೀತನಿಗೆ ಅಲ್ಲಿದ್ದ ವೈವಿಧ್ಯಮಯ ಬೋರಂಗಿಗಳನ್ನು ಕಂಡು ದಂಗಾಗಿ ಹೋದ.

ಬಂದ ವಿಷಯವನ್ನು ಶರಣಪ್ಪ ಹೇಳಿದ. ಶರಣಪ್ಪನ ಮಾತುಗಳನ್ನು ಕೇಳುತ್ತಿದ್ದಂತೆಯೇ ನಿಂಗನ ಮುಖ ನಿರ್ವಿಣ್ಣವಾಗತೊಡಗಿತು?" ಈಗ ಎರಡಿಪ್ಪತ್ತು ವರ್ಷದ ಹಿಂದ ಬಂದಿದ್ದರ ನೀವು ಹೇಳೂ ಗಿಡಗೋಳು ಅಲ್ಲೊಂದು, ಇಲ್ಲೊಂದು ಸಿಗತಿದ್ದು. ಈಗೇನೈತಿ ಮನುಷ್ಯಾರು ಹಚ್ಚಿದ ಗಿಡಗಳಟ್ಟ ಉಳದಾವ. ದೇವರು ಹಚ್ಚಿದ್ದ ಗಿಡಗೋಳು ನಾಶ ಆಗ್ಯಾವ?ಎಲ್ಲಾ ಹ್ವಾದು..ಎಲ್ಲಾ ಹ್ವಾದು. ಅಗಾ ಈ ನಗಾರಿ ಬೋರಂಗಿಗೋಳು ಆ ಗಿಡದಾಗ ತಲಿ ಕೆಳಗ ಮಾಡಿ ನಡೀತಿದ್ದು. ಎಟ್ಟೊಕೊಂದು ನಗಾರಿ ಬೋರಂಗಿ ಅದ ಗಿಡದಾಗಿಂದ ತರತಿದ್ದೆ..ಈಗ ಒಂದೇ ಒಂದು ಗಿಡಾನೂ ಉಳದಿಲ್ಲ.." ನಿಂಗನ ಮಾತು ಕೇಳಿ ಎಲ್ಲರಿಗೂ ನಿರಾಶೆಯಾಯಿತು. ಬಂದ ದಾರಿಗೆ ಸುಂಕವಿಲ್ಲ ಎನ್ನುವಂತೆ ನಿಧಾನಕ್ಕೆ ಎಲ್ಲರೂ ಎದ್ದು, ನಾವಿನ್ನು ಬರ್ತೀವಿ ಎಂದು ಹೇಳಿ ಹೊರಟರು. ಇನ್ನೇನು ಬಾಗಿಲು ದಾಟಬೇಕು ಎನ್ನುವಷ್ಟರಲ್ಲಿ ನಿಂಗ ಎಲ್ಲರನ್ನೂ ಕರೆದ." ಅಗಾ ಜರಾ ಬರ್ರಿ. ನನಗ ಗುಡ್ಡದ ತನಕಾ ನಡ್ಯಾಕ ಆಗಾಂಗಿಲ್ಲ, ಕಣ್ಣೂ ಮಂಜ ಮಂಜ ಆಗ್ಯಾವ. ಚಕ್ಕಡಿ ಗಾಡ್ಯಾಗ ಕರಕೊಂಡು ಹೋಗಿ ಮತ್ತ ತಿರುಗಿ ಮನೀಗಿ ಬಿಡತೀನಿ ಎಂದರ ನಾನು ಬರಲಾಕ ಸಿದ್ಧ ಅದೀನಿ. ನಿಮ್ಮ ನಸೀಬದಾಗ ಇದ್ದರ ಗಿಡಾ ಸಿಕ್ಕಿರತೈತಿ.." ಎಂದ. ಎಲ್ಲರ ಮುಖದಾಗೂ ಜೀವಕಳೆ.

**ಮನೆಯ ಅಂಗಳದಾಗ ನೂರಾರು ಬೋರಂಗಿಗಳನ್ನು ಹರಡಿಕೊಂಡು ನಿಂಗ ಕೂತಿದ್ದ. ಎಣ್ಣಿ ಬೋರಂಗಿ, ನಗಾರಿ ಬೋರಂಗಿ, ಕುಡ್ಡಿ ಬೋರಂಗಿ ಹೀಗೆ ಕೆಲವೇ ಬೋರಂಗಿಗಳನ್ನು ಕಂಡಿದ್ದ ಅಜೀತನಿಗೆ ಅಲ್ಲಿದ್ದ ವೈವಿಧ್ಯಮಯ ಬೋರಂಗಿಗಳನ್ನು ಕಂಡು ದಂಗಾಗಿ ಹೋದ.**

ಅದಾನ್ರಿ..ಅವನನ್ನು ಛೋಲೊ ಮಾಡಬಹುದ್ರೀ? " ಎಂದು ಕುತೂಹಲ ತಾಳಲಾರದೇ ಕೇಳಿದ. " ಓಹೊ.. ಬೇಕಾದ್ದಂಗ ಮಾಡಬಹುದು". " ನಮ್ಮ ಕಾಕಾನ ಮಗಾ ಹ್ವಾದ ವರುಷ ಬಾಂವ್ಯಾಗಿನ ಗಾಳ ತಗ್ಯಾಕ ಹೋಗಿ.. ಮ್ಯಾಲಿಂದ ಬಿದ್ದು ಎರಡೂ ಕಾಲುಗಳ ಸ್ವಾಧೀನ ಕಳಕೊಂಡಾನ ..ಅವನ ಕಾಲೂ ಬರಬಹುದ್ರೀ" ಉಸಿರು ಬಿಗಿ ಹಿಡದು ಮತ್ತೆ ಶರಣಪ್ಪ ಕೇಳಿದ. " ಇವೆಲ್ಲವನ್ನೂ ಸರಿಪಡಿಸಬಹುದು ಶರಣಪ್ಪ." " ಹಂಗಾದರ ನಡೀರಿ ಮನೀಗಿ ಹೋಗೇಬಿಡೂಣು" ಎಂದು ಶರಣಪ್ಪ ಮೇಲೆ ಎದ್ದ." ಅದನ್ನೇ ಹುಡುಕಿಕೊಂಡು ನಿಮ್ಮೂರಿಗೆ ಬಂದಿದ್ದು ಶರಣಪ್ಪ. " ನಮ್ಮೂರಾಗ ಅದಕ್ಕ ಪರಿಹಾರ ಐತ್ರಿ?" ಆಶ್ಚರ್ಯಭರಿತನಾಗಿ ಶರಣಪ್ಪ ಕೇಳಿದ. " ನಾನು ಈ ದ್ರವ ಕುಡಿಸಿದಾಗ ಏನೇನು ಲಕ್ಷಣಗಳು , ಅದಕ್ಕ ನ್ಯೂಕ್ಲಿಯೊಟೈಡ್ ಗಳ ಜೋಡಣೆ ಹೇಗೆಲ್ಲಾ ಕಾರಣ ಅಂತ ತೋರಿಸಿದೆನಲ್ಲಾ?..ಇದೇ ದ್ರವವನ್ನು ಒಂದು ಗಿಡದ ಕಾಂಡದ ಒಳ ತಿರುಳಿನಿಂದ ಮಾಡಿದ ಬಟ್ಟಲಿನಲ್ಲಿ ಒಂದು ದಿನ ಇಟ್ಟು ಕುಡಿದರೆ, ನಮ್ಮ ಅಪೇಕ್ಷೆಗೆ ತಕ್ಕಂತೆ ನ್ಯೂಕ್ಲಿಯೋಟೈಡ್ ಗಳು ಜೋಡಣೆಯಾಗುತ್ತಾ ಹೋಗುತ್ತವೆ. ಆ ಗಿಡವನ್ನೇ ಹುಡುಕುತ್ತಾ ನಿಮ್ಮೂರಿಗೆ ಬಂದಿದ್ದು. ಅಂಥದೊಂದು ಗಿಡ ನಿಮ್ಮೂರ ಗುಡ್ಡದಲ್ಲಿದೆ ಎಂಬ ಮಾಹಿತಿಯಿದೆ" ಎಂದು ರಮಾಕಾಂತ ಹೇಳಿದ.

ಅಜೀತ ತುಂಬಾ ತಾಳ್ಮೆಯಿಂದ ಎಲ್ಲವನ್ನೂ ಕೇಳಿಸಿಕೊಂಡ. " ರಮಾಕಾಂತ ತುಂಬಾ ಅದ್ಭುತವಾಗಿ ಸಂಶೋಧನೆ ಮಾಡಿದ್ದೀಯಾ. ನಿನಗೆ ಎಲ್ಲಾ ರೀತಿಯ ಸಹಕಾರವನ್ನು ನಾನು ನೀಡುವೆ" ಎನ್ನುತ್ತಾ ಅವನನ್ನು ಅಪ್ಪಿಕೊಂಡ. ಅಜೀತ, ಶರಣಪ್ಪ ಮತ್ತು ರಮಾಕಾಂತ ಎಲ್ಲರೂ ಸೇರಿ ಆ ಗಿಡದ ಲಕ್ಷಣ, ಎಷ್ಟು ಎತ್ತರ ಬೆಳೆಯುತ್ತದೆ? ಎಲ್ಲ ಮಾಹಿತಿಗಳ ಬಗ್ಗೆ ಚರ್ಚೆ ಮಾಡಿದರು.

ಅಷ್ಟರಲ್ಲಿ ಶರಣಪ್ಪ " ನಮ್ಮೂರಾಗ ಬೋರಂಗಿ ನಿಂಗ ಅನ್ನಾಂವ ಒಬ್ಬ ಅದಾನ್ರೀ. ಅವನಿಗೆ ಗುಡ್ಡದಾಗಿನ ಎಲ್ಲಾ ಗಿಡಮರಗಳೂ,ಬಳ್ಳಿಗಳೂ

ಕಾರು ಗುಡ್ಡದ ಕಡೆಗೆ ಹೊಂಟಿತು. ಎರಡು ಮೂರು ತಾಸುಗಳಷ್ಟು ಗುಡ್ಡದಲ್ಲಿ ಸುತ್ತಾಡಿದರೂ ಗಿಡದ ಪತ್ತೆ ಇಲ್ಲ. ಎಲೆ, ಹೂಗಳು ಎಲ್ಲವೂ ಹೋಲಿಕೆ ಆದರೂ ಗಿಡದ ತೊಗಟೆ ನೋಡಿ ,ನಿಂಗ ಇದಲ್ಲ ಅಂತ ಗೋಣು ಆಡಿಸಿಬಿಡತಿದ್ದ..ಸೋತು ಸುಣ್ಣರಾಗಿ ಇನ್ನೇನು ಮನೆಗೆ ತೆರಳಬೇಕು ಎನ್ನುವಷ್ಟರಲ್ಲಿ ಇದ್ದಕ್ಕಿದ್ದಂತೆ ನಿಂಗನ ಕೈಯಲ್ಲಿದ್ದ ನಗಾರಿ ಬೋರಂಗಿಗಳು ವಿಚಿತ್ರವಾಗಿ ವರ್ತಿಸತೊಡಗಿದವು." ಎಲ್ಲಾರೂ ಬಡಗ್ಗನ ನೆಲದ ಮ್ಯಾಲ ಡಬ್ಬ ಮಲಕೊಳ್ರಿ. ಜೇನು ನೊಣಗಳ ಹಿಂಡು ಇದೇ ಹಾದ್ಯಾಗ ಹಾರಿ ಹೊಂಟಾವ.." ನಿಂಗ ಇಷ್ಟು ಹೇಳಿ ತಕ್ಷಣವೇ ನೆಲಕ್ಕೆ ಒರಗಿದ. ಎಲ್ಲರೂ ಧಡ ಧಡನೇ ನೆಲದ ಮೇಲೆ ಒರಗಿದರು..ಕ್ಷಣಾರ್ಧದಲ್ಲಿ ಸೊಂಯ್ ಎಂದು ಜೇನುನೊಣಗಳ ಹಿಂಡು ಹಾದು ಹೋಯಿತು. " ಉಸ್ಸಪ್ಪಾ ಅಂತ ಎಲ್ಲರೂ ಎದ್ದು ನಿಂತರು. ನಿಂಗನ ಕೈಯಲ್ಲಿದ್ದ ಬೋರಂಗಿಗಳು ತಪ್ಪಿಸಿಕೊಂಡಿದ್ದವು. ನಿಂಗ ಚಡಪಡಿಸತೊಡಗಿದ. ಬೋರಂಗಿಗಳ ಹುಡುಕಾಟ ಶುರುವಾಯಿತು. ಬದಿಯಲ್ಲಿದ್ದ ಗಿಡದ ಮೇಲೆಯೇ ಕುಳಿತಿದ್ದವು. ಶರಣಪ್ಪ ಅವುಗಳನ್ನು ಹಿಡಿಯಲು ಹೋದ. ಅವು ತಲೆಕೆಳಗಾಗಿ ಮೇಲಕ್ಕೆ ಚಲಿಸತೊಡಗಿದವು. ರಮಾಕಾಂತ ಒಮ್ಮೆಲೇ ಚೀರಿದ " ನಿಂಗಪ್ಪಜ್ಜ..ಬೋರಂಗಿಗಳು ಈ ಗಿಡದ ಮೇಲೆ ತಲೆಕೆಳಗಾಗಿ ಚಲಿಸುತ್ತಿವೆ" ನಿಂಗ ನಿಧಾನಕ್ಕೆ ಎದ್ದು ಅದರ ತೊಗಟೆ ಬಿಡಿಸಿದ. ವಾಸನೆ ನೋಡಿದ,ರುಚಿ ನೋಡಿದ– ಅವನ ಕಣ್ಣುಗಳು ಅರಳತೊಡಗಿದವು ಉಳಿದವರ ಮುಖ ಅಗಲವಾಗತೊಡಗಿದವು. ಶರಣಪ್ಪ ಆನಂದದಿಂದ "ಕೇಹೋ"ಅಂತ ಜೋರಾಗಿ ಕೂಗಿದ?ಗುಡ್ಡದ ತುಂಬೆಲ್ಲಾ ಕೂಗು ಮಾರ್ದನಿಸತೊಡಗಿತು!!

*ನಾರಾಯಣ ಬಾಬಾನಗರ್ ಶಿಕ್ಷಕರು. ಇದು ಕುತೂಹಲಿ ವೈಜ್ಞಾನಿಕ ಕಥಾಸ್ಪರ್ಧೆಗೆಂದು ಸ್ವೀಕರಿಸಲಾದ ಕಥೆ. ಇದೊಂದೇ ಕಥೆ ಸ್ಪರ್ಧೆಗೆ ಬಂದಿದ್ದರಿಂದ ಯಾವುದೇ ಬಹುಮಾನವನ್ನೂ ಘೋಷಿಸಲಾಗಿಲ್ಲ.*







# ಕಲ್–ಸಂಜೀವಮ್ಮನ ವೃತ್ತಾಂತ

**ಕಲ್ಲಿನೊಳಗಿಂದ ಉದ್ಭವಿಸಿದ ಜಂತುವನ್ನು ನಿಗ್ರಹಿಸಬಹುದೇ? ಹೇಗೆ?**

● ಶಾಂತಲಾ ಅನಿಲ್

ಇತಿಹಾಸ ಸೃಷ್ಟಿಯಾಗುತ್ತಿತ್ತು. ಪಳೆಯುಳಿಕೆಯಾಗಿದ್ದ ಒಂದು ಜಂತು ಎರಡು ಸಾವಿರ ವರ್ಷಗಳ ನಂತರ ಜೀವಂತವಾಗುತ್ತಿದ್ದ ಕ್ಷಣವದು,

ಬೆಳಗಿನ ಟ್ರೆಕಿಂಗ್ ನಲ್ಲಿ ವಿಭಿನ್ನವಾಗಿ ಕಾಣುತ್ತಿದ್ದ ನಾಲ್ಕೈದು ಕಲ್ಲುಗಳನ್ನು ತಮ್ಮ ಡೇರೆಗೆ ತಂದಿದ್ದ ದೃತಿ ಅವುಗಳನ್ನು ನೀರಿನಲ್ಲಿ ಹಾಕಿ, ಸ್ವಚ್ಛಮಾಡುತ್ತಿದ್ದಳು. ಕೆಂಪು–ಕಂದುಬಣ್ಣದ ಹಸ್ತದಗಲದ ಕಲ್ಲಿನ ಒಂದು ಮೂಲೆಯಲ್ಲಿ ಏನೋ ಚಲಿಸಿದಂತೆ ಕಾಣಿಸಿತು. ಮತ್ತಷ್ಟು ನೀರುಹಾಕಿ ಉಜ್ಜಲು, ಅಲ್ಲಿದ್ದ ಸಣ್ಣ ಹುಳು ಇನ್ನಷ್ಟು ಚಲಿಸಿತು! ಆ ಕಪ್ಪು ಹುಳು ಕಲ್ಲಿನ ಮೇಲುಗಡೆ ಚಲಿಸುತ್ತಿದ್ದರೆ, ಉಫ್ ಎಂದು ಊದಿ ಕೊಡವುತ್ತಿದ್ದಳೇನೋ? ಆದರೆ ಆ ಹುಳು ಕಲ್ಲಿನ ಒಳಗೆ ಹೊಕ್ಕಿದಂತಿದದ್ದು , ತೆಳ್ಳನೆಯ ಪದರವೊಂದು ಅದರ ಮೇಲೆ ಹರಡಿದಂತಿತ್ತು .

" ಗಗನ್, ನೋಡಿಲ್ಲಿ! ಈ ಕಲ್ಲಿನೊಳಗಿನಿಂದ ಒಂದು ಹುಳ ಹುಟ್ಟುತ್ತಿದೆ!" ಗಗನನೊಂದಿಗೆ ಕೃತಿ ಮತ್ತು ಸಾಗರ್ ಕೂಡ ಬಂದರು.

"ಎಲ್ಲಿ ತೋರಿಸು." ಗಗನ್ ತನ್ನ ಬಳಿ ಇದ್ದ ಪುಟ್ಟ ಚಾಕುವಿನಿಂದ ಹುಳುವಿನ ಮೇಲಿದ್ದ ಕಲ್ಲಿನ ಪದರವನ್ನು ಕೆರೆಯತೊಡಗಿದ. " ಗಟ್ಟಿ ಇದೆ!" ಎನ್ನುತ್ತಾ ಮತ್ತಷ್ಟು ಜೋರಾಗಿ ಕೆರೆಯುತ್ತಿದ್ದಾಗ, ಕಲ್ಲು ಕೈಜಾರಿ ಬಿದ್ದು ಇಬ್ಭಾಗವಾಗಲು, ಅದರಲ್ಲಿದ್ದ ಹುಳು ಗಗನ ಕಾಲಿನ ಮೇಲೆ ಹಾರಿತ್ತು.

ಅಂದು ಬೆಳಿಗ್ಗೆ ಬಿದ್ದು, ಕಾಲಿನ ಮೇಲೆ ದೊಡ ಗಾಯ ಮಾಡಿಕೊಂಡಿದ್ದ. ಬಾಯಿತೆರೆದುಕೊಂಡಿದ್ದ ಗಾಯದ ಮೇಲೆಯೇ ಆ ಹುಳು ಬಿದ್ದುಬಿಟ್ಟಿತು. "ಹಾ!" ಕೊಡವಿಕೊಂಡು ಬಿಡಬೇಕು ಎನ್ನುವಷ್ಟರಲ್ಲಿ ಗಾಯದಲ್ಲಿಯೇ ಸರಸರನೆ ಚಲಿಸ ತೊಡಗಿತು. ಆ ಕ್ಷಣ ಗಗನನಿಗೆ ಒಂದು ವಿಧವಾದ ಹಾಯಾದ ಅನುಭವವಾಯಿತು!

"ಏಯ್! ಛೀ! ಹುಳ ಗಾಯದಲ್ಲಿ ಬಿತ್ತು!! ತೆಗೆಯೋ !" ಎಂದು ಇತರರು ಹೇಳಿದರೂ, ಅವನು ಮಾತ್ರ–" ಇರ್ರೋ! ಒಂಥರಾ ಚೆನ್ನಾಗಿದೆ! " ಎನ್ನುತ್ತಾ ಹುಳು ಗಾಯದಲ್ಲೆಲ್ಲಾ ಹರಿದಾಡುವುದನ್ನು ನೋಡುತ್ತಿದ್ದನು. ಮುಂದಿನ ಐದು ನಿಮಿಷಕ್ಕೆ ಉದ್ವಿಜ್ಞನಾಗಿ "ಅಯ್ಯೋ! ಎಲ್ರೂ ಬನ್ರೋ ! ಇಲ್ನೋಡಿ!" ಎಂದು ಬೊಬ್ಬೆ ಇಟ್ಟಾಗ ಮತ್ತೆ ಎಲ್ಲರೂ ಅಲ್ಲಿ ಮುತ್ತಿದರು. ಅವನ ಕಾಲಿನ ಮೇಲಿದ್ದ ಗಾಯ ಮಾಯವಾಗಿತ್ತು! ಅದರ ಮೇಲೆ ಬಿದ್ದಿದ್ದ ಹುಳು ಮೆಲ್ಲಗೆ ಹರಿಯುತ್ತಾ ಅವನ ಮಂಡಿಯ ಬಳಿಯಿತ್ತು !!

" ಗಾಯ ಕಾಣಿಸುತ್ತಲೇ ಇಲ್ಲ!!" ಎಂದು ಕೃತಿ ಗಾಯವಿದ್ದ ಜಾಗವನ್ನು ಮತ್ತೆ ಮತ್ತೆ ಮುಟ್ಟಿದಳು.

"ಹೂಂ!!' ಗಾಯವಿದ್ದ ಜಾಗವನ್ನು ತಾನೂ ಮುಟ್ಟಿಕೊಳ್ಳುತ್ತಾ, "ಹುಳು ಗಾಯದ ಮೇಲೆ ಹರಿಯುವಾಗ, ಹಿತವಾಗಿತ್ತು. ಹುಳು ಹಾಗೆ–

ಹೀಗೆ ಗಾಯದಲ್ಲೆಲ್ಲಾ ಓಡಾಡುತ್ತಿದ್ದಂತೆ, ಗಾಯ ಚಿಕ್ಕದಾಗುತ್ತ ಹೋಗಿ, ಕೊನೆಗೆ ಸಂಪೂರ್ಣ ವಾಸಿಯಾಗಿ ಹೋಯ್ತು! ಹೆಪ್ಪುಗಟ್ಟಿದ್ದ ರಕ್ತ ನೀರಾಗಿ, ಇಂಗಿಹೋಗಿ; ಹಸಿಯಾಗಿ ಸೀಳಿದ್ದ ಚರ್ಮ ಒಂದುಗೂಡಿಕೊಂಡುಬಿಟ್ಟಿದೆ! ಇದು.. ಇದು.. ಈ ಹುಳದಲ್ಲಿ ಏನೋ ಮ್ಯಾಜಿಕ್ ಇದೆ ಕಣ್ರೋ!!" ಬೆಳಿಗ್ಗೆ ಆಗಿದ್ದ ಗಾಯವನ್ನು ಅವರುಗಳು ನೋಡಿರದಿದ್ದರೆ, ಅವನು ಎಂದಿನಂತೆ ಬುರುಡೆ ಬಿಡುತ್ತಿದ್ದಾನೆ ಎಂದುಕೊಂಡುಬಿಡುತ್ತಿದ್ದರು. ಅಷ್ಟರಮಟ್ಟಿಗೆ ಗಾಯ ವಾಸಿಯಾಗಿತ್ತು.

"ಇರು, ನಾನೂ ನೋಡ್ತೀನಿ!" ಸಾಗರ್ ಆ ಹುಳುವನ್ನು ತೆಗೆದುಕೊಂಡು, ತನ್ನ ಕೈಮೇಲಾಗಿದ್ದ ಒಂದು ತರಚು ಗಾಯದ ಮೇಲೆ ಅದನ್ನು ಬಿಟ್ಟುಕೊಂಡನು. ಆ ಹುಳು ತನ್ನ ಪಾಡಿಗೆ ಅವನ ಗಾಯದ ಮೇಲೆ ಚಲಿಸಲಾರಂಬಿಸಿತು. "ಆಹ್! ಒಂಥರ ಹಿತವಾಗಿ ಚುಮು?ಚುಮು ಅನ್ಸುತ್ತಿದೆ ಕಣ್ರೋ!!" ಗಾಯದ ಮೇಲೆ ಹುಳ ಹರಿಯುತ್ತಿದ್ದಂತೆಯೇ, ಕೆಂಪಾಗಿದ್ದ ಗಾಯದ ಚರ್ಮ ಅಚ್ಚುಕಟ್ಟಾಗಿ ಕೂಡಿಕೊಂಡು, ಎರಡು ನಿಮಿಷಗಳನಂತರ ಏನೂ ಕಲೆ ಇಲ್ಲದೆ ಚರ್ಮ ಸಹಜಾವಾಗಿ ಕಂಡಿತು!! ಅವರೆಲ್ಲರೂ ದವಡೆ ಜಾರಿಸಿಕೊಂಡು ಧಿಗ್ಭ್ರಾಂತರಾದರು! ಮುಂದಿನ ಒಂದೆರಡು ಘಂಟೆಗಳಲ್ಲಿ ನಾಲ್ವರೂ, ಟ್ರೆಕ್ಕಿಂಗಿನಲ್ಲಿ ತಮಗಾಗಿದ್ದ ತರಚು ಗಾಯಗಳ ಮೇಲೆ ಹುಳುವನ್ನು ಹರಿಯಲು ಬಿಟ್ಟು, ಗುಣವಾಗುವುದನ್ನು 'ಅನುಭವಿಸಿದರು'.

" ಈ ಹುಳುವನ್ನು 'ನಿಮೆಟೋಡ್ಸ್ " ( Nematodes ) ಎಂಬ ಜಾತಿಗೆ ಸೇರಿಸಬಹುದು ಅನಿಸುತ್ತದೆ. ಕಿಲುಮೆ ಹುಳುಗಳ ಹಾಗೆ. ಗಾಯದ ಮೇಲೆ ಹರಿಯುತ್ತಲ್ಲೇ ಅದನ್ನು ವಾಸಿ ಮಾಡುತ್ತಿದ್ದೆ ಎಂದರೆ ಅದರ ಉಗುಳಿನಲ್ಲಿ (saliva) ಅಥವಾ ಶರೀರದ ದ್ರವದಲ್ಲಿ ( ಛಿಉಜಥಿ ಜಿಟಣುಜ) ಗಾಯವನ್ನು ಆರಿಸುವ ಹಾಗೂ ಗುಣ ಪಡಿಸುವ ವಿಶೇಷ ಗುಣ ಇರಲೇ ಬೇಕು!!" ಕೃತಿ ಉದ್ವಿಘ್ನಳಾಗಿ ಹೇಳಿದಳು .

" ಇಂತಹ ಹುಳುಗಳ ಬಗ್ಗೆ ನಾವು ಇದುವರೆಗೂ ಕೇಳಿರಲೇ ಇಲ್ಲ!!"

"ಇದು ಸಾವಿರಾರು ವರ್ಷಗಳ ಹಿಂದೆ ಬದುಕಿದ್ದು, ಕಾರಣಾಂತರದಿಂದ ಕಲ್ಲಿನೊಳಗೆ ಈಘುಟ ಆಗಿದ್ದಿರಬೇಕು! ನೀರು ಹಾಕುತ್ತಿದ್ದಂತೆ ಪುನಶ್ಚೇತನವಾದಂತಿದೆ!"

" ಕೃತಿ, ನೀನು ವೈದ್ಯೆ ! ವೈದ್ಯಕೀಯದಲ್ಲಿ ಇದು ಅದೆಷ್ಟು ಉಪಯುಕ್ತವಾಗುತ್ತದೆ ಅಲ್ಲವೆ?"

" ಅಯ್ಯೋ! ನನಗದನ್ನು ಊಹಿಸಿಕೊಳ್ಳಲೂ ಆಗುತ್ತಿಲ್ಲ! ಹೊಲಿಗೆ, ರಕ್ತಸ್ರಾವ, ಬ್ಯಾಂಡೇಜ್, ಡ್ರೆಸ್ಸಿಂಗ್ ಇಲ್ಲದೆ ಗಾಯಗಳನ್ನು ನಿಮಿಷಗಳಲ್ಲಿ ಸರಿ ಮಾಡಿಬಿಡ್ತು ! ಮೈ ಮೇಲಿನ ಗಾಯಗಳನ್ನು ವಾಸಿಮಾಡಿದಂತೆ, ಹೊಟ್ಟೆ-ಕರಳುಗಳಲ್ಲಿನ ಹುಣ್ಣುಗಳಿಗೆ; ಹೃದಯ, ಮೆದುಳುಗಳು ಮತ್ತು ಇತರೆ ಅಂಗಗಳಲ್ಲಿ ಉರಿಯೂತವಿದ್ದಾಗ (Inflammation) ವಾಸಿ ಮಾಡಲು, ಶಸ್ತ್ರ ಚಿಕಿತ್ಸೆ ಮಾಡಿದ ನಂತರ ಗಾಯ ಗುಣವಾಗಲು .. ಹೀಗೆ ಇನ್ನೂ ಅನೇಕ ಕಡೆ ಈ ಹುಳು ಉಪಯುಕ್ತವಾಗಬಹುದು!"

" ಓಹ್! ನಾವು ಯಾವುದೋ ಚಮತ್ಕಾರಿ ಹುಳುವನ್ನೇ ಕಂಡುಹಿಡಿದುಬಿಟ್ಟಿದ್ದೇವೆ!"

"ಅದನ್ನು ಮೊದಲು ಗುರುತಿಸಿ, ಸುಪ್ತಾವಸ್ಥೆಯಿಂದ ಪುನಶ್ಚೇತನಗೊಳಿಸಿದೆನೆಂಬ ಖ್ಯಾತಿ ನನ್ನದು!" ದೃತಿ ಸ್ಪಷ್ಟಪಡಿಸಿದಳು.

" ಇದರ ಬಗ್ಗೆ ಎಲ್ಲರಿಗೂ ಈಗಲೇ ತಿಳಿಸಬೇಕು! ನಾವು ಇದರಿಂದ ಹೆಸರುವಾಸಿಯಾಗಿಬಿಡುತ್ತೇವೆ!"

" 'ಟ್ರೆಕ್ಕಿಂಗ್-ಗೆ ಹೋದ ನಾಲ್ಕು ಯುವಜನರ ವಿಸ್ಮಯಕಾರಿ ಶೋಧನೆ!' ' ವೈದ್ಯಕೀಯಕ್ಕೆ ಆವಿಷ್ಕಾರಿ ಕಾಣಿಕೆಯಿತ್ತ ಯುವ ಪೀಳಿಗೆ!'- ವಾಹ್ ಇನ್ನೂ ಏನೇನು ಬಿಗ್ ಬ್ರೇಕಿಂಗ್ ಅಂತ ವಾರ್ತೆಯಾಗುತ್ತದೆ! ನಾಳೆಯೊಳಗೆ ನಾವು ವಿಶ್ವ ವಿಖ್ಯಾತರಾಗುತ್ತೇವೆ! ಆದರೆ.. ಹಾಳಾದ್ದು! ಕಾಡಿನಲ್ಲಿ ನೆಟ್ ವರ್ಕ್ ಎಲ್ಲಿ? ಬೇಗ ನಾಡಿಗೆ ಹೋಗಿ ಎಲ್ಲರಿಗೂ ತಿಳಿಸಿಬಿಡುವ! " ಗಗನ ಒಂದೇ ಸಮನೆ ಬಡಬಡಿಸುತ್ತಿದ್ದ.

"ಲೋ ಮಾರಾಯ ಸ್ವಲ್ಪ ಸುಮ್ಮನಿರೋ! ಕೂಲ್ ಡೌನ್!" ಗುಂಪಿನಲ್ಲಿ ಎಲ್ಲರಿಗಿಂತ ಹಿರಿಯವನಾದ ಸಾಗರನಿಗೆ ವಿವೇಕ ಹೆಚ್ಚು. " ಇಲ್ಲಿ ಆತುರ ಪಡಬಾರದು! ಇದರ ಬಗ್ಗೆ ವೈಜ್ಞಾನಿಕವಾದ ಸಂಶೋಧನೆಗಳು ನಡೆಯ ಬೇಕಿದೆ. ಇದು ಮಹತ್ತರ ಆವಿಷ್ಕಾರವಾದರೂ, ಸಧ್ಯಕ್ಕೆ ಗೋಪ್ಯವಾಗಿಡುವುದು ಅತ್ಯಗತ್ಯ. ನಾವಿಂದು ಕಂಡಿದ್ದನ್ನು ಮತ್ತಷ್ಟು ಸಂಶೋಧನೆ-ಅಧ್ಯಯನಗಳಿಂದ ದೃಡೀಕರಿಸಲ್ಪಟ್ಟಾದಮೇಲೆಯಷ್ಟೇ ನಾವಿದನ್ನು ಬಹಿರಂಗ ಪಡಿಸಬೇಕು. ಅಲ್ಲಿಯವರೆಗೂ ಬಾಯಿಗೆ ಬೀಗ ಹಾಕಿಕೊಳ್ಳಿ!"

" ಹುಳು ಶಾಸ್ತ್ರಜ್ಞರ (Entymologist) ಸಹಾಯವೂ ಬೇಕು. ನಮಗೆ ತಿಳಿದಂತೆ ಈಗ ಇಂತಹ ಹುಳುವಿಲ್ಲ. ಸಾವಿರಾರು ವರ್ಷಗಳ ಹಿಂದೆ ಬದುಕಿದ್ದ ಈ ಹುಳುವನ್ನು ಮತ್ತೆ ನಾವು ಕಂಡುಹಿಡಿದದ್ದೂ ಮಹತ್ತರ ಸಾಧನೆಯೇ! ಮುಂದೆ ಇದಕ್ಕೆ ಹೆಸರಿಡುವಾಗ ನಮ್ಮೆಲ್ಲರ ಹೆಸರನ್ನೂ ಸೇರಿಸುತ್ತಾರೇ ಅಲ್ಲವೆ? . ದೃತಿ-ಕೃತಿ-ಗಗನ್-ಸಾಗರೆನ್ಸಿಸ್ ಅಥವಾ, ಮೋಟಕ್ಕಾಗಿ- ದೃಕೃಸಾಗನೆನ್ಸಿ- ಎಂದು ಹೆಸರಿಟ್ಟುಬಿಡಿ ಎಂದು ಸೂಚಿಸೋಣವೇ?" ಗಗನ್ ನಕ್ಕ.

" ಅದುವರೆಗೂ ಇದಕ್ಕೆ ಏನಾದರೂ ಹೆಸರಿಡೋಣವೆ?"

"ಕಲ್-ಸಂಜೀವಮ್ಮ ! ಕಲ್ಲಿನಲ್ಲಿ ಸಿಕ್ಕಿದ್ದು, ಹಾಗೂ ವಾಸಿಮಾಡುವ (ಸಂಜೀವಿನಿ) ಗುಣ ಹೊಂದಿದೆ!" ದೃತಿ ತಟ್ಟನೆ ಹೇಳಿದಾಗ ಎಲ್ಲರೂ ನಕ್ಕು ಸಮ್ಮತಿಸಿದರು. ತೊರೆಯಲ್ಲಿ ಈಜಿ ಬರಲು ಹೊರಟರು. ಅದಕ್ಕೂ ಮುಂಚೆಯೊಮ್ಮೆ ಕಲ್-ಸಂಜೀವಮ್ಮನನ್ನು ನೋಡಲು ಹೋದವರಿಗೆ ಆಶ್ಚರ್ಯ ಕಾದಿತ್ತು!! ಹುಳುವನ್ನು ಒದ್ದೆಯಾಗಿದ್ದ ಒಂದು ದೊಡ್ಡ ಲೋಟದಲ್ಲಿ ಹಾಕಿದ್ದರು. ಮೂರು ಘಂಟೆಗಳ ನಂತರ ನೋಡಿದಾಗ ಅಲ್ಲಿ ಬುಳು-ಬುಳು ಅಂತ ಒಂದರ ಮೇಲೊಂದು ಹರಿದಾಡುತ್ತಿರುವ ಹುಳಗಳ ಕಪ್ಪು ಜೊಂಪೆ ಕಂಡಿತು!!



"ಅಯ್ಯೋ! ಕಲ್-ಸಂಜೀವಮ್ಮ ಮರಿ ಹಾಕಿದ್ದಾಳೆ!!" ಬಟ್ಟಲನ್ನು ಕೈಯ್ಯಲ್ಲಿ ತೆಗೆದುಕೊಂಡು ಒಳಗೆ ನೋಡಿದ ಕೃತಿ, ಮರುಕ್ಷಣವೇ ಅದನ್ನು ಅಲ್ಲಿಟ್ಟು ಸತತವಾಗಿ ಕೆಮ್ಮತೊಡಗಿದಳು. ಏನೋ ಉಸಿರು ಕಟ್ಟಿದಂತೆ ಆಯಿತೆಂದಳು!

"ಅರೆ! ಸಣ್ಣ ಕಡ್ಡಿಯಂತೆ ಇದ್ದದ್ದು, ಈಗ ಉದ್ದಕ್ಕೆ ದಪ್ಪಕ್ಕೂ ಬೆಳೆದಿದೆ!!"

"ಇಲ್ ನೋಡ್ರಿ! ಈ ಬಟ್ಟಲ ಸುತ್ತಲೂ ಇರುವೆ, ಮಿಡತೆ , ಜೇಡ ,ಜೇನು...ಎಷ್ಟೊಂದು ಸಣ್ಣ ಹುಳುಗಳು ಸತ್ತು ಬಿದ್ದಿವೆ!!"

ಎಲ್ಲರಿಗೂ ಭಯವಾಯಿತು ! ಹುಳಗಳು ಯಾವುದೋ ವಿಷ ಅನಿಲ ಅಥವ ದ್ರವನ್ನು ಸೂಸುತ್ತಿವೆಯೇ? ಅವುಗಳ ಬಳಿ ಹೋದರೆ ಉಸಿರು ಕಟ್ಟಿದಂತೆ ಆಗುತ್ತಿತ್ತು. ದೃತಿಗೆ ಇದ್ದ ಆಸ್ತಮಾ

ಹೆಚ್ಚಾಯಿತು.

"ಏನ್ ಮಾಡೋದೋ? ಈ ಜಂತು ಘಂಟೆ–ಘಂಟೆಗೂ ದೊಡ್ಡದಾಗುತ್ತಿದೆ! ಅಲ್ಲದೆ, ಮರಿಗಳನ್ನೂ ಹಾಕುತ್ತಿದೆ. ಐದಾರು ಘಂಟೆಗಳಲ್ಲಿ ಇಪ್ಪತ್ತು–ಮೂವತ್ತಾಗಿವೆ ಎಂದರೆ, ಬೆಳಗಾಗುವುದರಲ್ಲಿ ಈ ಜಾಗವನೆಲ್ಲಾ ಆವರಿಸಿಬಿಟ್ಟರೆ?!"

"ಹತ್ತಿರ ಹೋದ ಕೀಟಗಳು ಸತ್ತಿವೆ, ನಾವು ಬಳಿಹೋದರೆ ಉಸಿರುಗಟ್ಟಿದಂತಾಗುತ್ತಿದೆ! ಇವುಗಳು ಏನೋ ವಿಷ ಅನಿಲ ಸೂಸುತ್ತಿವೆಯೇ? ಅಯ್ಯೋ! ಈ ಕಾಡನ್ನು ಆವರಿಸಿಕೊಂಡು, ಹಾನಿ ಮಾಡಿ, ನಾಡಿಗೆ ಹರಿದು ಹೋದರೆ? ಇಲ್ಲಿ ಪ್ರಾಣಿಗಳು ಸತ್ತರೆ „ಅಲ್ಲಿ ಮನುಷ್ಯರು!!" ಗಗನನ ಧ್ವನಿ ನಡುಗುತ್ತಿತ್ತು!

" ಒಂದ್ ಕೆಲಸ ಮಾಡೋಣ?. ಆ ಜಂತುಗಳನ್ನು ನೀರಿನಲ್ಲಿ ಹಾಕಿ ಬಿಟ್ಟರೆ? ಉಸಿರು ಕಟ್ಟಿ ಸತ್ತು ಹೋಗುತ್ತವೆ!"

" ದೃತಿ! ಕಲ್ಲಿನೊಳಗೆ ಹೊಕ್ಕು ಸಂಪೂರ್ಣವಾಗಿ ಶುಷ್ಕವಾದಾಗ, ಜಂತು ಸತ್ತಂತಿತ್ತು. ನೀನು ನೀರು ಹಾಕಿದ ಮೇಲೆಯೇ ತಾನೇ ಅದಕ್ಕೆ ಪುನರುಜ್ಜೀವನ ಆದದ್ದು?! ಇನ್ನು ಅವುಗಳನ್ನು ನೀರಿನಲ್ಲಿ ಹಾಕಿದೆವೆಂದರೆ, ಸಂತಾನ ಹೆಚ್ಚಿಸಿಕೊಂಡು ನೆಲ ನೀರು, ಎಲ್ಲವನ್ನೂ ಹಾಳುಮಾಡುತ್ತವೆ!" ಸ್ವಲ್ಪ ಮುಂಚೆಯಷ್ಟೇ "ನಾನು ಕಂಡುಹಿಡಿದದ್ದು!" ಎಂಬ ಹೆಮ್ಮೆಯಲ್ಲಿದ್ದ ದೃತಿಗೆ ಈಗ ಅಪರಾಧ ಪ್ರಜ್ಞೆ ಕಾಡ ತೊಡಗಿತು.

" ಹಾಗಿದ್ದರೆ.. ಸುಟ್ಟು ಬಿಡೋಣವೆ ?"

ಜಂತುಗಳಿದ್ದ ಲೋಟದ ಒಂದೆರಡಡಿ ಹತ್ತಿರ ಹೋದರೂ ಉಸಿರು ಕಟ್ಟಿದಂತೆ ಆಗಿತ್ತಿತ್ತು. ಅದರ ಸುತ್ತಲೂ ಹುಳು–ಹುಪ್ಪಟೆಗಳು ಸಾಯುತ್ತಲೇ ಇದ್ದು, ಹೆಣಗಳ ಸಣ್ಣ ?ಸಣ್ಣ ಗುಪ್ಪೆಗಳು ಹೆಚ್ಚಾಗುತ್ತಿದ್ದವು! ನಾಲ್ಕು ಬಾರಿ ಬೆಂಕಿ ಕಡ್ಡಿಯನ್ನು ಗೀರಿ ಹುಳುಗಳ ಲೋಟದಲ್ಲಿ ಬಿಸಾಡಿದರೂ ಏನೂ ಆಗಲಿಲ್ಲ! ಲೋಟದೊಳಗೆ ಬೆಂಕಿ ಹಾಕುತ್ತಿದ್ದಂತೆಯೇ ಜ್ವಾಲೆ ನಂದಿಸಿ ಹೋಗುತ್ತಿತ್ತು. ಎಲ್ಲರೂ ಕೆಮ್ಮುತ್ತಲೇ ಪುರಲೆ, ಒಣಗಿದ ಎಲೆಗಳನ್ನು ತಂದು, ಲೋಟಡ ಸುತ್ತ ರಾಶಿ ಹಾಕಿ ಬೆಂಕಿ ಹಚ್ಚಲು ಪ್ರಯತ್ನಿಸಿದರು. ಮತ್ತೆ ಅದೇ! ಆ ಜಂತುಗಳ ಸನಿಹದಲ್ಲಿ ಬೆಂಕಿ ಹೊತ್ತಿಕೊಳ್ಳುತ್ತಲೇ ಇರಲಿಲ್ಲ. ಸಂತಾನ ಹೆಚ್ಚಿ, ಲೋಟ ಇನ್ನೇನು ತುಂಬಿ, ಜಂತುಗಳು ಹೊರಗೂ ಉದುರಿಹೋಗುವ ಹಂತಕ್ಕೆ ಆಪತ್ತು ತಲುಪಿತ್ತು.

"ಅಯ್ಯೋ! ಅವುಗಳು ಲೋಟದಿಂಡ ಹೊರಗೆ ಬಂದು ಬಿಟ್ಟವೆಂದಾರೆ, ಅವುಗಳನ್ನು ತಡಿಯಲಾಗುವುದಿಲ್ಲ! ಏನಾದರೂ ಮಾಡಲೇ ಬೇಕು!"

ಕೆಲವು ಘಂಟೆಗಳ ಹಿಂದಷ್ಟೇ, Fossil ಆಗಿದ್ದ ಹುಳುವನ್ನು, ಅದರ ಗುಣ ಪಡಿಸುವ ಗುಣವನ್ನು ಕಂಡುಹಿಡಿದೆವು, ಅಂತರರಾಷ್ಟ್ರೀಯ ಮನ್ನಣೆ ಪಡೆಯುತ್ತೇವೆ ಎಂದು ಬೀಗುತ್ತಿದ್ದವರು, ಈಗ ಭಯ–ಭೀತರಾಗಿ, ತಲೆ ಮೇಲೆ ಕೈ ಹೊತ್ತು ಕುಳಿತು ಕೊಂಡರು. ಏನಾದರಾಗಲಿ ಎಂದು ಹೊರಟು ಬಿಡಬಹುದಿತ್ತು. ಆದರೆ ಮುಂದಿನ ದಿನಗಳಲ್ಲಿ ಹುಳುಗಳು ಕಾಡನೆಲ್ಲಾ ಆವರಿಸಿ, ಪ್ರಾಣಿಗಳಿಗೆ ಕಂಟಕವಾಗಿ, ನಾಡಿನವರೆಗೂ ಹರಿದು ಬರುವುದು ಖಚಿತ! ಆಗ.. ಎಂಥ ದುರಂತ! ಎಂತಹ ಅಪವಾದ!

" ಬೆಂಕಿಯ ಜ್ವಾಲೆ ಉರಿಯುವುದಕ್ಕೆ ಆಮ್ಲ ಜನಕ ಬೇಕು. ಜಂತುಗಳ ಬಳಿ ಬೆಂಕಿ ಹೊತ್ತಿಕೊಳ್ಳುತ್ತಿಲ್ಲವೆಂದರೆ , ಅವುಗಳ ಸುತ್ತಲಿರುವ, ಗಾಳಿಯಲ್ಲಿನ ಆಮ್ಲ ಜನಕವನ್ನು ಅವುಗಳು ಹೀರಿಕೊಳ್ಳುತ್ತಲಿವೆ! ಇದರಿಂದಾಗಿಯೇ ಇವುಗಳ ಸುತ್ತಲೂ ಯಾವ ಹುಳು ಹುಪ್ಪಟೆಗಳೂ ಬದುಕುತ್ತಿಲ್ಲ! ನಮಗೂ ಅವುಗಳ ಬಳಿ ಹೋಗುತ್ತಲೇ ಆಮ್ಲಜನಕಾದ ಕೊರತೆಯಿಂದ ಉಸಿರುಗಟ್ಟಿದಂತೆ ಆಗಿ, ಕೆಮ್ಮುತ್ತಿದ್ದೀವಿ! ಹುಳುಗಳು ವಿಷಯ ಅನಿಲವನ್ನು ಸೂಸುತ್ತಿಲ್ಲ! ಅವುಗಳು ನಮ್ಮ ವಾಯುಮಂಡಲದಲ್ಲಿನ ಆಮ್ಲಜನಕವನ್ನು ಹೀರಿಕೊಳ್ಳುತ್ತಿವೆ!!" ಕೃತಿ ಹೇಳುತ್ತಲೇ ಎಲ್ಲರಿಗೂ ತಾವಿರುವ ಭಯಾನಕ ಸನ್ನಿವೇಶದ ಸಂಪೂರ್ಣದರಿವಾಗಿ ಬೆನ್ನು ಹುರಿಯಲ್ಲಿ ಮಂಜುಗಡ್ಡೆ ಹರಿಯಿತು!

ಹುಳುಗಳಿಗೆ ಬದುಕಿರಲು ಅತಿ ಹೆಚ್ಚು ಪ್ರಮಾಣದಲ್ಲಿ ಆಮ್ಲ ಜನಕದ ಆಗತ್ಯವಿತ್ತು. ಅವುಗಳ ಪ್ರಾಣ ಆಮ್ಲಜನಕವನ್ನು ಅಷ್ಟು ಅವಲಂಬಿಸಿತ್ತು ಎಂದಾದರೆ, ಕೃತಕವಾಗಿ ಆಮ್ಲ ಜನಕದ ಕೊರತೆಯಾಗುವಂತೆ ಮಾಡಿದರೆ ಅವುಗಳು ಸಾಯುವುದು ಖಚಿತ! ಆದರೆ ಮನುಷಯರಿಗೂ ಆಮ್ಲಜನಕ ಆಗತ್ಯವಾದ್ದರಿಂದ, ತಮಗೆ ತೊಂದರೆಯಾಗದೇ ಕೇವಲ ಹುಳುಗಳಷ್ಟೇ ಸಾಯುವಷ್ಟು ಆಮ್ಲಜನಕದ ಕೊರತೆ ಉಂಟು ಮಾಡುವುದಾದರೂ ಹೇಗೆ? ಅದೂ ಕಾಡಿನಲ್ಲಿ?

ಎರಡು ಘಂಟೆ ಯೋಚಿಸಿ ಮತ್ತೆ ಹುಳುಗಳಿದ್ದಲ್ಲಿಗೆ ಬಂದಾಗ, ಅಲ್ಲಿ ಎರಡು ಮೊಲಗಳು, ಒಂದು ಹಾವು , ನಾಲಕ್ಕು ಪುಟ್ಟ ಪಕ್ಷಿಗಳು ಹೆಣವಾಗಿದ್ದವು !

ಸಾಗರನ ಕೈಯ್ಯಲ್ಲಿ ದೊಡ್ಡದಾದ ದಪ್ಪ ಪ್ಲಾಸ್ಟಿಕ್ ಹಾಳೆ ಹಾಗೂ ರಬ್ಬರ್ ಬ್ಯಾ–ಗಳಿದ್ದವು. ದೃತಿಯ ಬಳಿ ಆರು ಪುಟ್ಟ ಪುಟ್ಟ ಪೊಟ್ಟಣಗಳಿದ್ದವು. ಅದು ಆಮ್ಲ ಜನಕ ಹೀರುಕ ( Oxygen absorber ) ಎಂಬ ರಾಸಾಯನಿಕ ಪುಡಿ. ನಾವೆಲ್ಲರೂ ಇವನ್ನೂ ನೋಡಿಯೇ ಇರುತ್ತೇವೆ. ತಿಂಡಿ–ತಿನಿಸುಗಳ ಡಬ್ಬಿಗಳಲ್ಲಿ ಬರುವ ಪುಟ್ಟ ಪೊಟ್ಟಣ. 'ತಿನ್ನುವುದಲ್ಲ' (Do-not-eat ) ಎಂಬ ಆದೇಶವೂ ಅವುಗಳ ಮೇಲೆ ಇರುತ್ತದೆ. ಬಿಸ್ಕತ್ತು, ಬೂಂದಿ, ಹಾಲಿನ ಪುಡಿ ಮತ್ತಿನ್ನಿತರೆ ಡಬ್ಬಗಳಲ್ಲಿ ತಿನಿಸುಗಳು ಹಾಳಾಗಬಾರದೆಂದು ಈ ಪುಟ್ಟ ಪೊಟ್ಟಣಗಳನ್ನು ಹಾಕಿರುತ್ತಾರೆ. ಅವುಗಳಲ್ಲಿರುವ ಪುಡಿ ಡಬ್ಬಿಯಲ್ಲಿನ ಆಮ್ಲಜನಕವನ್ನು ಹೀರಿ, ತಿನಿಸನ್ನು ಹಾಳಾಗದೆ ತಾಜಾವಾಗಿರಿಸುತ್ತದೆ.

**ಹುಳುಗಳಿಗೆ ಬದುಕಿರಲು ಅತಿ ಹೆಚ್ಚು ಪ್ರಮಾಣದಲ್ಲಿ ಆಮ್ಲಜನಕದ ಆಗತ್ಯವಿತ್ತು. ಅವುಗಳ ಪ್ರಾಣ ಆಮ್ಲಜನಕವನ್ನು ಅಷ್ಟು ಅವಲಂಬಿಸಿತ್ತು ಎಂದಾದರೆ, ಕೃತಕವಾಗಿ ಆಮ್ಲ ಜನಕದ ಕೊರತೆಯಾಗುವಂತೆ ಮಾಡಿದರೆ ಅವುಗಳು ಸಾಯುವುದು ಖಚಿತ!**

ಯುವಕರು ತಾವು ಕ್ಯಾಂಪಿಂಗ್–ಗೆ ತಂದಿದ್ದ ತಿನಿಸುಗಳ ಡಬ್ಬಿಗಳಿಂದ ಆ ಪೊಟ್ಟಣಗಳನ್ನು ಶೇಖರಿಸಿದರೂ. ಅವುಗಳ ಮೇಲಯೇ ಈಗವರ ಸಂಪೂರ್ಣ ಅವಲಂಬನೆ! ಮಾಡು–ಅಥವ–ಮಡಿ ಸನ್ನಿವೇಶ! ಪೊಟ್ಟಣಗಳನ್ನು ಹುಳುಗಳಿದ್ದ ಲೋಟದಲ್ಲಿ ಹಾಕಿದರು. ಲೋಟ ತುಂಬುತ್ತಿದ್ದರಿಂದ ತುರುಕಬೇಕಾಯಿತು. ಲೋಟದ ಬಾಯಿಯನ್ನು ಗಟ್ಟಿಯಾಗಿ ಪ್ಲಾಸ್ಟಿಕ್ ಹಾಳೆಯಿಂದ ಮುಚ್ಚಿ ಭದ್ರವಾಗುವಂತೆ ಮೂರು–ನಾಲ್ಕು ರಬ್ಬರ್ ಬ್ಯಾಂಡ್–ಗಳನ್ನು ಹಾಕಿದರು.

ಲೊಟದೊಳಗೆ ಗಾಳಿ ಆಡಂತೆ ಮುಚ್ಚಿದ್ದರು. ಅದರಲ್ಲಿರುವ ಸ್ವಲ್ಪ ಆಮ್ಲಜನಕವನ್ನು ಪೊಟ್ಟಣಗಳಲ್ಲಿದ್ದ ಪುಡಿ ಹೀರಿಕೊಳ್ಳುತ್ತಿತ್ತು. ಕಲ್–ಸಂಜೀವಮ್ಮ ಮತ್ತು ಮಕ್ಕಳಿಗೆ ಉಸಿರು ಕಟ್ಟಿತು!

ಇಷ್ಟನ್ನು ಉಸಿರುಕಟ್ಟಿಸಿಕೊಂಡು ಮುಗಿಸಿ, ನಂತರ ಕೆಮ್ಮುತ್ತಾ, ಆ ಜಾಗದಿಂದ ದೂರ ಓಡಿಹೋದರು. ಒಂದು ಘಂಟೆಯ ನಂತರ ಬಂದು ನೋಡಲು, ಹುಳುಗಳ ಜೊಂಪೆ ನಿಷ್ಕ್ರಿಯವಾಗಿದ್ದಂತೆ ಕಂಡಿತು! ಸುತ್ತಲೂ ನೊಣ, ದುಂಬಿ, ಚಿಟ್ಟೆಗಳು ಯಥಾಪ್ರಕಾರ ಹಾರಾಡುತ್ತಲಿದ್ದವು!

ಮಾರನೆಯ ಬೆಳಿಗ್ಗೆ ಎದ್ದು ನೋಡಲು, ಜಂತುಗಳ ಜೊಂಪೆ ಸತ್ತು ಸುರುಟುಹೋಗಿತ್ತು! ಆಳವಾದ ಗುಂಡಿ ತೋಡಿ, ಪ್ಲಾಸ್ಟಿಕ್ಕಿನಲ್ಲಿ ಸುತ್ತಿದ್ದ ಆ ಲೋಟವನ್ನು ಅದರಲ್ಲಿ ಹುದುಗಿಸಿ, ಮಣ್ಣುಮ್ಮುಚ್ಚಿ, ಕಲ್ಲು ಹೇರಿದರು. .

ಕಲ್–ಸಂಜೀವಮ್ಮನ ಜನನ–ಮರಣದ ವೃತ್ತಾಂತ ಗೋಪ್ಯವಾಗಿಡಲು ಪ್ರಮಾಣ ಮಾಡಿಕೊಂಡು ನಾಡಿನತ್ತ ಹೆಜ್ಜೆ ಹಾಕಿದರು.

*ಡಾ.ಶಾಂತಲಾ ಅನಿಲ್, ವೃತ್ತಿಯಿಂದ ಪ್ರಸೂತಿ ತಜ್ಞೆ–ವೈದ್ಯೆ.*
*ಪ್ರವೃತ್ತಿಯಿಂದ ವಿಜ್ಞಾನ ಕಥೆಗಾರ್ತಿ ಹಾಗೂ ಕಲಾವಿದೆ.*



**ಆ ಹುಡುಗನ ನಿಗೂಢ ಜ್ವರಕ್ಕೆ ಕಾರಣವೇನಿರಬಹುದು?**

● ಡಾ. ಕಿರಣ್ ವಿ.ಎಸ್.

# ಹೀಗೊಂದು ವಿಷ(ಷಾ)ದ ಕತೆ

"ಸರ್...."

ಗಂಭೀರವಾಗಿ ಬರೆಯುತ್ತಿದ್ದ ಪ್ರೊಫೆಸರರು ಸ್ವಲ್ಪ ಕೋಪದಿಂದಲೇ ತಲೆ ಎತ್ತಿ ನೋಡಿದರು. ಅವರ ವಿದ್ಯಾರ್ಥಿ ಬಾಗಿಲಲ್ಲಿ ನಿಂತಿದ್ದ.

"ಏನು?" ಎನ್ನುವಂತೆ ಹುಬ್ಬೇರಿಸಿದರು. ವಿದ್ಯಾರ್ಥಿ ದಿಗಿಲಿನಿಂದಲೇ ಹೇಳಿದ: "ಒಂದು ಕೇಸ್ ಬಗ್ಗೆ ಚರ್ಚೆ ಮಾಡೋದಿತ್ತು"

ಮಕ್ಕಳ ಕಾಯಿಲೆಗಳ ಅತ್ಯಂತ ದೊಡ್ಡ ತಜ್ಞ ಎಂದು ಹೆಸರಾಗಿದ್ದ ಪ್ರೊಫೆಸರರು ಮುಖ್ಯವಾದ ಪುಸ್ತಕ ಬರೆಯಲು ಕಳೆದ ಮೂರು ತಿಂಗಳಿನಿಂದ ರಜೆಯ ಮೇಲಿದ್ದರು. ಆಸ್ಪತ್ರೆಗೆ ಬಂದು, ತಮ್ಮ ಕೊಠಡಿಯಲ್ಲಿ ಕೂತು ಬರವಣಿಗೆ ಮಾಡುತ್ತಿದ್ದರು. ತಮ್ಮನ್ನು ಯಾರೂ ಡಿಸ್ಟರ್ಬ್ ಮಾಡಬಾರದು ಎಂದು ಅವರ ಕಟ್ಟಾಜ್ಞೆ. ಅದನ್ನು ಮೀರಿ ವಿದ್ಯಾರ್ಥಿಯೊಬ್ಬ ಅವರ ಕೋಣೆಗೆ ಬಂದಿದ್ದಾನೆ ಎಂದರೆ ಪರಿಸ್ಥಿತಿ ಗಂಭೀರವಾಗಿಯೇ ಇದ್ದಿರಬೇಕು.

ಆತನನ್ನು ಒಳಗೆ ಬರುವಂತೆ ಸನ್ನೆ ಮಾಡಿದ ಪ್ರೊಫೆಸರರು ಬರೆಯುತ್ತಿದ್ದ ಹಾಳೆಗಳನ್ನು ಬದಿಗೆ ಸರಿಸಿ ಮತ್ತೊಮ್ಮೆ ಹುಬ್ಬೇರಿಸಿದರು.

"ಆರು ವರ್ಷದ ಹುಡುಗ ಸರ್. ಈಚೆಗೆ ಮೂರ್ನಾಲ್ಕು ತಿಂಗಳ ಹಿಂದೆ ಸರ್ಕಾರಿ ಶಾಲೆಗೆ ಸೇರಿಸಿದ್ದಾರೆ. ವಾರಕ್ಕೆ ಒಂದೋ ಎರಡೋ ದಿನ ಮಾತ್ರ ಶಾಲೆಗೆ ಹೋಗುತ್ತಾನೆ. ಆದರೆ ಸ್ಕೂಲಿನಲ್ಲಿ ಅವನದ್ದು ವಿಪರೀತ ಗಲಾಟೆ; ವೈದ್ಯಕೀಯ ಪರೀಕ್ಷೆ ಮಾಡಿಸಿ ಎಂದು ಶಾಲೆಯ ಶಿಕ್ಷಕಿ ಹೇಳಿ ಕಳಿಸಿದ್ದಾರೆ. ತಂದೆತಾಯಿ ತುಂಬಾ ಬಡವರು. ಹೆದರಿದ್ದಾರೆ. ಎಲ್ಲಾ ಪರೀಕ್ಷೆ ಮಾಡಿದ್ದೇವೆ. ಏನೂ ತಿಳಿಯುತ್ತಿಲ್ಲ. ಅದಕ್ಕೇ..." ವಿದ್ಯಾರ್ಥಿ ತಡವರಿಸಿದ.

"ಡೀಟೈಲಾಗಿ ಹೇಳಿ" ಪ್ರೊಫೆಸರರು ಅಭಯ ನೀಡಿದರು.

"ಮಗುವಿನ ತಂದೆತಾಯಿ ಬೆಳಗ್ಗೆ ಕೆಲಸಕ್ಕೆ ಹೋದರೆ ರಾತ್ರಿ ಹಿಂದಿರುಗುತ್ತಾರೆ. ಮಗುವು ವಯಸ್ಸಾದ ಓರ್ವ ಅಜ್ಜಿಯ ಸುಪರ್ದಿಯಲ್ಲಿ ಇರುತ್ತದೆ. ಅವನ ದಿನನಿತ್ಯದ ಚಟುವಟಿಕೆಗಳ ಬಗ್ಗೆ ತಾಯಿಗೆ ಹೆಚ್ಚು ತಿಳಿದಿಲ್ಲ. ಮೊದಲಿನಿಂದಲೂ ತಂಟೆ ಹೆಚ್ಚು ಅಂತ ಅವನನ್ನು ನೋಡಿಕೊಳ್ಳುವ ಅಜ್ಜಿ ಹೇಳುತ್ತಾರೆ. ಬೆಳಗ್ಗಿನಿಂದ ಎಲ್ಲಿರುತ್ತಾನೆ ಎಂದು ಅಜ್ಜಿಗೆ ತಿಳಿದಿಲ್ಲ. ಹಸಿವಾದಾಗ ಮನೆಗೆ ಬರುತ್ತಾನೆ. ಹಾಗಾಗಿ, ಮನೆಯಿಂದ ಹೆಚ್ಚು ದೂರ ಹೋಗುವುದಿಲ್ಲವೆಂದು ಅನಿಸುತ್ತದೆ ಸರ್. ಈಚೆಗೆ ಅವನ ರಂಪ-ರಗಳೆ ಮತ್ತೂ ಜಾಸ್ತಿಯಾಗಿದೆ ಎನುತ್ತಾರೆ. ಹುಡುಗ ಹೈಪರ್ ಇದ್ದಾನೆ. ಕೂತ ಕಡೆ ಕೂರುವುದಿಲ್ಲ. ಶಾಲೆಯಲ್ಲಿ ತುಂಬಾ ರೆಸ್ಟ್'ಲೆಸ್, ಜಗಳಗಂಟ ಎಂದು ಶಿಕ್ಷಕಿ ಹೇಳುತ್ತಾರೆ. ನಾವು ಪರೀಕ್ಷಿಸಿದಂತೆ ಅವನಿಗೆ ಬುದ್ಧಿಮಾಂದ್ಯತೆ ಏನಿಲ್ಲ; ಸ್ವಂತವಾಗಿ ಬಟ್ಟೆ ಧರಿಸಲು ಬರುತ್ತದೆ; ಬಣ್ಣಗಳನ್ನು ಗುರುತಿಸುತ್ತಾನೆ; ದೃಷ್ಟಿ ಚೆನ್ನಾಗಿದೆ;

ಕಿವಿ ಸ್ವಲ್ಪ ಮಂದ; ಆದರೆ ಕಿವುಡು ಇಲ್ಲ. ಸ್ವಲ್ಪ ತೊದಲುತ್ತಾನೆ; ಪದಗಳ ಕಲಿಕೆ ವಯಸ್ಸಿಗಿಂತ ಕಡಿಮೆ; ಆಟ ಹೆಚ್ಚು; ಊಟದಲ್ಲಿ ಆಸಕ್ತಿ ಕಡಿಮೆ. ಸ್ವಲ್ಪ ತೂಕ ಕಡಿಮೆ ಇದ್ದಾನೆ. ರಕ್ತದಲ್ಲಿ ಹೀಮೊಗ್ಲೋಬಿನ್ ಕಡಿಮೆಯಿದೆ; ಆದರೆ ಮಲದಲ್ಲಿ, ಮೂತ್ರದಲ್ಲಿ ರಕ್ತ ನಷ್ಟವಾಗುತ್ತಿಲ್ಲ. ಕೆಂಪು ರಕ್ತಕಣಗಳು ಸಣ್ಣ ಇದ್ದವೆಂದು ಎರಡು ತಿಂಗಳು ಕಬ್ಬಿಣ ಅಂಶದ ಸಿರಪ್ ಕೊಟ್ಟೆವು. ಆದರೆ ರಕ್ತ ಕಣಗಳು ಹಾಗೆಯೇ ಇವೆ. ಉಳಿದಂತೆ ಶರೀರ ಪರೀಕ್ಷೆಯಲ್ಲಿ ಏನೂ ವ್ಯತ್ಯಾಸ ಇಲ್ಲ. ನಾರ್ಮಲ್ ಕಾಣುತ್ತಾನೆ"

"ಕರ್ಕೊಂಬನ್ನಿ" ಪ್ರೊಫೆಸರರು ಆಜ್ಞಾಪಿಸಿದರು.

ವಿದ್ಯಾರ್ಥಿ ಓಡಿ ಹೋಗಿ ಕೆಲಕ್ಷಣಗಳಲ್ಲಿ ಹುಡುಗನ ಜೊತೆ ವಾಪಸ್ಸಾದ. ತುಂಬಾ ಕೊಸರಾಡುತ್ತಿದ್ದ, ಕತ್ತಿನ ಸುತ್ತಲೂ ನಾಲ್ಕು ತಾಯತ್ತುಗಳನ್ನು ಕಟ್ಟಿಸಿಕೊಂಡಿದ್ದ ಹುಡುಗನನ್ನು ಪ್ರೊಫೆಸರರು ತಾಳ್ಮೆಯಿಂದ ಪರೀಕ್ಷಿಸಿದರು. ಆನಂತರ "ಇವನ ಅಪ್ಪ ಅಮ್ಮ ಯಾರಾದರೂ ಇದ್ದರೆ ಕರೆಸಿ" ಎಂದು ಹುಡುಗನನ್ನು ಹೋಗಗೊಟ್ಟರು.

ಹೆದರಿ ಮುದ್ದೆಯಾಗಿದ್ದ ಹುಡುಗನ ತಾಯಿ ಪ್ರೊಫೆಸರರ ಮುಂದೆ ನಿಂತರು. ಆಕೆಯ ಕೆಲಸ, ವಾಸ, ಮನೆಯ ವಿಳಾಸ, ಜೀವನ ಶೈಲಿಗಳನ್ನು ವಿಚಾರಿಸಿದರು. ಮಗುವಿನ ತಂದೆಯ ಬಗ್ಗೆ ವಿವರ ತಿಳಿದರು. ಆಕೆಯ ಕೈಬೆರಳು, ಉಗುರು, ಕಣ್ಣುಗಳ ಪರೀಕ್ಷೆ ಮಾಡಿದರು. ನಂತರ ವಿದ್ಯಾರ್ಥಿಯನ್ನು ಕರೆದರು. ಆತನಿಗೆ ಒಂದು ಚೀಟಿ ಕೊಟ್ಟು ಹೇಳಿದರು: "ಮೊದಲು ಮಗುವಿನ ಮತ್ತು ತಾಯಿಗೆ ನಾನು ಬರೆದಿರುವ ರಕ್ತ ಪರೀಕ್ಷೆ ಮಾಡಿಸಿ. ನಂತರ ಈಕೆಯ ಜೊತೆಯಲ್ಲಿ ಇವರ ಮನೆಗೆ ಹೋಗಿ. ಮನೆಯ ಪರಿಸ್ಥಿತಿ, ಗೋಡೆಗಳು, ನೆಲ, ಜಂತಿ, ಛಾವಣಿ, ನೀರಿನ ಪೈಪು ಎಲ್ಲವನ್ನೂ ಪರೀಕ್ಷೆ ಮಾಡಿ. ಬರುವಾಗ ಇವರ ನಲ್ಲಿಯ ನೀರಿನ ಸ್ಯಾಂಪಲ್ ಬೇಕು. ಹಾಗೆಯೇ ಗೋಡೆಯ ಪೈಂಟು, ಮಗು ಆಡುವ ಆಟಿಕೆಗಳು, ಮನೆಯ ಸುತ್ತಮುತ್ತಲ ವಾತಾವರಣ ಎಲ್ಲವನ್ನೂ ಗಮನಿಸಿ ವರದಿ ಮಾಡಬೇಕು. ಅಕ್ಕಪಕ್ಕದವರ ಅನುಮತಿ ಪಡೆದು ಮನೆಯ ಸುತ್ತಮುತ್ತಲಿನ ಫೋಟೊ ತೆಗೆದು ತನ್ನಿ. ಈಕೆಯ ಮನೆಯ ಆಸುಪಾಸಿನಲ್ಲಿ ಇರುವ ಇತರ ಮಕ್ಕಳಲ್ಲೂ ಇಂತಹುದೇ ಲಕ್ಷಣಗಳು ಇವೆಯೇ ಎಂದು ವಿಚಾರಿಸಿ. ಹುಡುಗನ ಜೊತೆಗೆ ಇರುವ ಅಜ್ಜಿಯ ರಕ್ತದ ಸ್ಯಾಂಪಲ್ ಕೂಡ ಬೇಕು. ಅವರ ರಕ್ತ ಪರೀಕ್ಷೆಯ ರಿಪೋರ್ಟ್ ಬಂದ ನಂತರ ಉಳಿದದ್ದನ್ನು ಹೇಳುತ್ತೇನೆ" ಎಂದು ಪ್ರೊಫೆಸರರು ತಮ್ಮ ಬರವಣಿಗೆಯಲ್ಲಿ ಮಜ್ಞರಾದರು.

ತಾಯಿ ಮತ್ತು ಮಗುವಿನ ರಕ್ತ ತೆಗೆದು, ಅದನ್ನು ತನ್ನ ಸಹಪಾಠಿಯ ಕೈಲಿಟ್ಟು, ಪ್ರೊಫೆಸರರು ಹೇಳಿದ ಪರೀಕ್ಷೆ ಮಾಡಿಸಲು ತಿಳಿಸಿದ ವಿದ್ಯಾರ್ಥಿ, ತಾಯಿಯ ಜೊತೆಗೆ ಹೊರಟು ಪ್ರೊಫೆಸರರು ಹೇಳಿದ ರೀತಿಯಲ್ಲಿ ಮಾಹಿತಿ ಸಂಗ್ರಹಿಸಿದ. ಮಗುವಿನ ಅಜ್ಜಿಯ ರಕ್ತವನ್ನು, ಮಗುವಿನ ಮನೆಯ ನೀರಿನ ಸ್ಯಾಂಪಲ್ ಅನ್ನೂ ಪ್ರೊಫೆಸರರು ಹೇಳಿದ ಪರೀಕ್ಷೆಗೆ ಕಳಿಸಿದ. ತನ್ನ ಪರಿವೀಕ್ಷಣೆಯ ವಿವರಗಳನ್ನೆಲ್ಲಾ ನೀಟಾಗಿ ಬರೆದು, ದಾಖಲೆಗಳನ್ನು ಜೊತೆ ಮಾಡಿ, ಮಗುವಿನ ಕೇಸ್ ಫೈಲಿನಲ್ಲಿಟ್ಟು ಪ್ರೊಫೆಸರರ ಬಳಿ ನೀಡಿದ. ಆತ ತಂದ ಚಿತ್ರಗಳನ್ನು ಪ್ರೊಫೆಸರರು ವಿವರವಾಗಿ ಪರಿಶೀಲಿಸಿದರು. ಮಗುವಿನ ವಾಸದ ಮನೆಯ ಗೋಡೆಗಳಿಗೆ ಸುಣ್ಣ ಹೊಡೆದಿದ್ದರು. ಯಾವ ಗೋಡೆಗಳಿಗೂ ಪೈಂಟಿನ ಬಣ್ಣವಿರಲಿಲ್ಲ. ಮಗುವಿನ ಮನೆಯ ಸುತ್ತಮುತ್ತಲ ಮಕ್ಕಳಲ್ಲಿ ಯಾರಿಗೂ ಈ ರೀತಿಯ ಸಮಸ್ಯೆ ಇಲ್ಲವೆಂದು ತಿಳಿಯಿತು. ಅಲ್ಲದೆ, ಈ ಜಗಳಗಂಟ ಮಗುವಿನ ಜೊತೆಯಲ್ಲಿ ಮನೆಯ ಸುತ್ತಮುತ್ತಲ ಬೇರಾವ ಮಗುವೂ ಆಡುವುದಿಲ್ಲವೆಂದೂ, ಅಜ್ಜಿಯ ಆರೈಕೆಯಲ್ಲಿ ಬೆಳೆಯುತ್ತಿರುವ ಈ ಮಗು ಬಹುತೇಕ ಸಮಯ ಎಲ್ಲಿರುತ್ತದೆ ಎಂದು ಅಜ್ಜಿಗೆ ತಿಳಿದೇ ಇರುವುದಿಲ್ಲವೆಂದೂ ವಿದ್ಯಾರ್ಥಿ ವರದಿ ಮಾಡಿದ. ಅಷ್ಟು ವೇಳೆಗೆ ಮಗುವಿನ, ತಾಯಿಯ, ಅಜ್ಜಿಯ ರಕ್ತದ ಪರೀಕ್ಷೆ, ಮತ್ತು ನಲ್ಲಿ ನೀರಿನ ಪರೀಕ್ಷೆಗಳ ವರದಿಗಳೂ ಬಂದವು. ಸೀಲು ಮಾಡಿದ ಲಕೋಟೆ ಒಡೆದು ವರದಿಗಳನ್ನು ನೋಡಿ ಗಂಭೀರವದನರಾದ ಪ್ರೊಫೆಸರರು ಎದ್ದು ನಿಂತು "ಮಗುವನ್ನು ಕರೆದು ತಾ. ಹೋಗೋಣ" ಎಂದು ವಿದ್ಯಾರ್ಥಿಗೆ ಹೇಳಿದರು.

ಮಗುವಿನ ವಾಸದ ಸ್ಥಳಕ್ಕೆ ಬಂದ ಪ್ರೊಫೆಸರರು ಮಗುವಿನ ಕೈಗೆ ದೊಡ್ಡ ಚಾಕಲೇಟೊಂದನ್ನು ಕೊಟ್ಟು, "ನೀನು ದಿನವೆಲ್ಲಾ ಎಲ್ಲಿ ಆಡುತ್ತೀಯೆ?" ಎಂದು ಕೇಳಿದರು. ಚಾಕಲೇಟಿನಿಂದ ಖುಷಿಯಾದ ಮಗು, ತಾನು ದಿನವೂ ಆಡುವ ಜಾಗದ ಬಳಿ ಪ್ರೊಫೆಸರನ್ನು ಕರೆದೊಯ್ದಿತು. ಮಗುವಿನ ಮನೆಯಿಂದ ಒಂದೆರಡು ಬ್ಲಾಕ್ ದೂರದಲ್ಲಿದ್ದ ನಿರ್ಜನ ಸ್ಥಳವೊಂದರಲ್ಲಿ ಹಾಳುಗೂಡಿನಂತೆ ನಿರ್ಮಾಣವಾಗಿದ್ದ ಒಂದು ಷೆಡ್ಡಿನ ಬಳಿ ಮಗುವಿನ ಜೊತೆಗೆ ಬಂದ ಪ್ರೊಫೆಸರರು, ಆ ಷೆಡ್ಡಿಗೆ ಜಡಿದಿರುವ ಬೀಗವನ್ನು ನೋಡಿ, "ಇದರೊಳಗೆ ಹೋಗುವುದು ಹೇಗೆ?" ಎಂದರು. ಮಗು ಆ ಷೆಡ್ಡಿನ ಹಿಂಭಾಗದಲ್ಲಿರುವ ಸಣ್ಣ ಕಿಂಡಿಯನ್ನು ತೋರಿಸಿತು. ಅದರೊಳಗೆ ದೊಡ್ಡವರು ಹೋಗುವಷ್ಟು ಸ್ಥಳಾವಕಾಶ ಇರಲಿಲ್ಲ. ಮಗು ಮಾತ್ರ ಅದರಲ್ಲಿ ಆರಾಮವಾಗಿ ತೂರಿಕೊಂಡು ಒಳಗೆ ಹೋಯಿತು. ಆ ಕಿಂಡಿಯ ಬಳಿ ಮಂಡಿಯೂರಿ ಕುಳಿತ ಪ್ರೊಫೆಸರರು ದೀರ್ಘ ಶ್ವಾಸ ಎಳೆದುಕೊಂಡರು. ನಂತರ ಮಗುವನ್ನು ಹೊರಗೆ ಕರೆದು, ಅದರ ಜೊತೆಯಲ್ಲಿ ವಾಪಸ್ ಆಸ್ಪತ್ರೆಗೆ ಹೊರಟರು. ದಾರಿಯುದ್ದಕ್ಕೂ ಯಾರ ಜೊತೆಯಲ್ಲೋ ಫೋನಿನಲ್ಲಿ ಮಾತನಾಡಿದರು.

ಈ ಘಟನೆಯಾದ ಎರಡು ದಿನಗಳಿಗೆ ದಿನಪತ್ರಿಕೆಗಳು ಪ್ರಮುಖ ಕ್ರೈಂ ಸುದ್ದಿ ಪ್ರಕಟಿಸಿದವು. ಹಳೆಯ ಲೆಡ್-ಆಸಿಡ್ ಬ್ಯಾಟರಿಗಳನ್ನು ಅನಧಿಕೃತವಾಗಿ ನವೀಕರಿಸಿ, ಅವಕ್ಕೆ ದೊಡ್ಡ ಕಂಪನಿಗಳ ಲೇಬಲ್ ಹಚ್ಚಿ, ಆ ಕಳ್ಳ ಮಾಲನ್ನು ಮಾರುಕಟ್ಟೆಯಲ್ಲಿ ಮಾರಾಟ ಮಾಡುತ್ತಿದ್ದ ಖದೀಮರ ಗುಂಪೊಂದನ್ನು ಪೋಲೀಸರು ಸೆರೆ ಹಿಡಿದ ಪ್ರಸಂಗ. ಮನೆಗಳಲ್ಲಿನ ಯು.ಪಿ.ಎಸ್ ಬ್ಯಾಟರಿ, ಪಾರ್ಕಿಂಗ್ ಮಾಡಿದ್ದ ಕಾರುಗಳ ಬ್ಯಾಟರಿ, ಸಣ್ಣ-ಪುಟ್ಟ ಕಾರ್ಖಾನೆಗಳಲ್ಲಿ ಬಳಸುತ್ತಿದ್ದ ಬ್ಯಾಟರಿಗಳು, ಗುಜರಿ ಅಂಗಡಿಗಳಿಂದ ಪಡೆದ ಬ್ಯಾಟರಿಗಳು ? ಹೀಗೆ ಹಲವಾರು ಲೆಡ್-ಆಸಿಡ್ ಬ್ಯಾಟರಿಗಳನ್ನು ತಮ್ಮ ಷೆಡ್ಡಿಗೆ ತಂದು, ಅಲ್ಲಿ ಹಳೆಯ ಸೀಸದ ಸರಳುಗಳನ್ನು ಅನಧಿಕೃತವಾಗಿ ಸಂಸ್ಕರಿಸಿ, ಹೊಸ ಆಸಿಡ್ ತುಂಬಿ, ಬ್ಯಾಟರಿ ಅಲ್ಪಸ್ವಲ್ಪ ಕೆಲಸ ಮಾಡುವಂತೆ ಮಾಡಿ, ಅವನ್ನು ಹೊಸ ಬ್ಯಾಟರಿಗಳ ಸೋಗಿನಲ್ಲಿ ಗ್ರಾಹಕರಿಗೆ ಕಡಿಮೆ ಬೆಲೆಯಲ್ಲಿ ಮಾರಾಟ ಮಾಡಿ ವಂಚಿಸುತ್ತಿದ್ದ ಕಳ್ಳರ ದೊಡ್ಡ ಜಾಲವೊಂದು ಪೋಲೀಸರ ಬಲೆಗೆ ಸಿಲುಕಿತ್ತು. ಅನೇಕ ದಿನಗಳಿಂದ ಈ ವಂಚನೆಯ ಜಾಲವನ್ನು ಪತ್ತೆಮಾಡಲು ಪ್ರಯತ್ನಿಸುತ್ತಿದ್ದ ಪೋಲೀಸರಿಗೆ ಅನಿರೀಕ್ಷಿತವಾಗಿ ದೊರೆತ ಮಹತ್ವದ ಸುಳಿವಿನಿಂದ ಈ ಮೋಸಗಾರರ ತಂಡ ಪತ್ತೆಯಾಯಿತು ಎಂದು ವರದಿಯಾಗಿತ್ತು. ಸುಳಿವು ನೀಡಿದ ವ್ಯಕ್ತಿಯ ಹಿನ್ನೆಲೆಯನ್ನು ಗೌಪ್ಯವಾಗಿ ಇರಿಸಿದ ಪೋಲೀಸರು, ಆ ವ್ಯಕ್ತಿಗೆ ನಗದು ಬಹುಮಾನ

**ತಾಯಿ ಮತ್ತು ಮಗುವಿನ ರಕ್ತ ತೆಗೆದು, ಅದನ್ನು ತನ್ನ ಸಹಪಾಠಿಯ ಕೈಲಿಟ್ಟು. ಪ್ರೊಫೆಸರರು ಹೇಳಿದ ಪರೀ-ಕ್ಷೆ ಮಾಡಿಸಲು ತಿಳಿಸಿದ ವಿದ್ಯಾರ್ಥಿ, ತಾಯಿಯ ಜೊತೆಗೆ ಹೊರಟು ಪ್ರೊಫೆಸರರು ಹೇಳಿದ ರೀತಿಯಲ್ಲಿ ಮಾಹಿತಿ ಸಂಗ್ರಹಿಸಿದ. ಮಗುವಿನ ಅಜ್ಜಿಯ ರಕ್ತವನ್ನು, ಮಗುವಿನ ಮನೆಯ ನೀರಿನ ಸ್ಯಾಂಪಲ್ ಅನ್ನೂ ಪ್ರೊಫೆಸರರು ಹೇಳಿದ ಪರೀಕ್ಷೆಗೆ ಕಳಿಸಿದ. ತನ್ನ ಪರಿವೀಕ್ಷಣೆಯ ವಿವರಗಳನ್ನೆಲ್ಲಾ ನೀಟಾಗಿ ಬರೆದು, ದಾಖಲೆಗಳನ್ನು ಜೊತೆ ಮಾಡಿ, ಮಗುವಿನ ಕೇಸ್ ಫೈಲಿನಲ್ಲಿಟ್ಟು ಪ್ರೊಫೆಸರರ ಬಳಿ ನೀಡಿದ. ಆತ ತಂದ ಚಿತ್ರಗಳನ್ನು ಪ್ರೊಫೆಸರರು ವಿವರವಾಗಿ ಪರಿಶೀಲಿಸಿದರು. ಮಗುವಿನ ವಾಸದ ಮನೆಯ ಗೋಡೆಗಳಿಗೆ ಸುಣ್ಣ ಹೊಡೆದಿದ್ದರು.**

ಘೋಷಿಸಿದ್ದರು.

ಇತ್ತ ಆಸ್ಪತ್ರೆಯಲ್ಲಿ ಸಂಭ್ರಮದ ವಾತಾವರಣ. ಹುಡುಗನ ತಾಯಿಗೆ ಭಾರಿ ಹಿಗ್ಗು. ಯಾರೋ ಅನಾಮಧೇಯ ವ್ಯಕ್ತಿ ಆಕೆಯ ಮಗನ ಚಿಕಿತ್ಸೆಗೆಂದು ದೊಡ್ಡ ಮೊತ್ತ ನೀಡಿದ್ದರು. ತನ್ನ ಜೀವನದಲ್ಲಿ ಎಂದೂ ಐದು ಅಂಕಿಯ ಮೊತ್ತವನ್ನು ನೋಡಿಲ್ಲದ ಆಕೆ ಬಹಳ ಸಂತಸಗೊಂಡಿದ್ದರು. ಹುಡುಗನ ಚಿಕಿತ್ಸೆಯ ವೆಚ್ಚದ ನಂತರವೂ ಉಳಿಯುವ ಸಾಕಷ್ಟು ಹಣದಲ್ಲಿ ತನ್ನ ಸಾಲಗಳನ್ನು ತೀರಿಸಿ, ಮನೆಗೆ ಬೇಕಾದ ವಸ್ತುಗಳನ್ನು ಖರೀದಿಸುವ ಯೋಜನೆ ಆಕೆಯದ್ದು. ಈ ಹಣ ಎಲ್ಲಿಂದ ಬಂದಿತೆಂಬ ಆಲೋಚನೆ ಆಕೆಯನ್ನು ಹೆಚ್ಚು ಬಾಧಿಸಲಿಲ್ಲ. ಕಷ್ಟಕಾಲಕ್ಕೆ ದೇವರು ನೆರವಾದನೆಂದು ಎಲ್ಲರಲ್ಲೂ ಹೇಳಿಕೊಳ್ಳುತ್ತಿದ್ದರು.



ವಿದ್ಯಾರ್ಥಿ ಮತ್ತೊಮ್ಮೆ ಪ್ರೊಫೆಸರರ ಕೋಣೆಗೆ ಬಂದ. ಯಥಾರೀತಿ ಬರವಣಿಗೆಯಲ್ಲಿ ನಿರತರಾಗಿದ್ದ ಪ್ರೊಫೆಸರರು ಆತನನ್ನು ನೋಡಿ ಕೂರುವಂತೆ ಸೂಚಿಸಿದರು. ತಮ್ಮ ಪೆನ್ನನ್ನು ಬದಿಗಿಟ್ಟು "ಏನು?" ಎನ್ನುವಂತೆ ಆತನನ್ನು ನೋಡಿದರು. ವಿದ್ಯಾರ್ಥಿಯ ಮುಖದಲ್ಲಿ ಹಿಗ್ಗು ಕಾಣುತ್ತಿತ್ತು. "ನೀವು ಹೇಳಿದ ಚಿಕಿತ್ಸೆ ನೀಡಿದೆವು ಸರ್. ಹುಡುಗ ಈಗ ಬಹಳ ಚೇತರಿಸಿಕೊಂಡಿದ್ದಾನೆ. ದೇಹದಲ್ಲಿ ರಕ್ತದ ಅಂಶ ಹೆಚ್ಚಿದೆ. ಮೊದಲಿನ ಹಾಗೆ ತಂಟೆ ಮಾಡುತ್ತಿಲ್ಲ. ಸಾಕಷ್ಟು ಚೂಟಿ ಹುಡುಗ ಸರ್. ಶಾಲೆಯಲ್ಲಿ ಚೆನ್ನಾಗಿ ಓದಿಸಿದರೆ ಒಳ್ಳೆಯ ಭವಿಷ್ಯವಿದೆ. ಆತನ ಕುಟುಂಬದವರು ನಮ್ಮನ್ನು ಬಹುವಾಗಿ ಹೊಗಳುತ್ತಿದ್ದಾರೆ. ಆದರೆ ಇದನ್ನೆಲ್ಲಾ ಮಾಡಿದ್ದು ನೀವು ಎನ್ನುವುದು ಅವರಿಗೆ ತಿಳಿದಿಲ್ಲ. ಪೋಲೀಸರಿಂದ ನಿಮಗೆ ಬಂದ ಬಹುಮಾನದ ಎಲ್ಲ ಹಣವನ್ನೂ ಆ ಕುಟುಂಬಕ್ಕೆ ನೀಡಿದ್ದೀರಿ ಎಂಬುದು ನಿಮಗೆ ಮತ್ತು ನನಗೆ ಮಾತ್ರ ತಿಳಿದಿದೆ. ಅಜಮಾಸು ಏನಾಯಿತು ಎಂಬ ಅಂದಾಜಿದ್ದರೂ, ನಿಖರವಾಗಿ ಈ ಕೇಸನ್ನು ನೀವು ಹೇಗೆ ಪರಿಹರಿಸಿದಿರಿ ಎಂದು ಸ್ಪಷ್ಟವಿಲ್ಲ. ನಿಮಗೆ ಅನುಕೂಲವಾದಾಗ ಹೇಳಿದರೆ ನಮಗೂ ತಿಳಿದಂತಾಗುತ್ತದೆ" ಎಂದ.

ಪ್ರೊಫೆಸರರು ಗಂಭೀರವಾಗಿ ಹೇಳಿದರು: "ಮತ್ತೆ ಮತ್ತೆ ನನ್ನನ್ನು ಡಿಸ್ಟರ್ಬ್ ಮಾಡದಿದ್ದರೆ ಈಗಲೇ ಹೇಳುತ್ತೇನೆ. ಹುಡುಗನ ರೋಗಲಕ್ಷಣಗಳನ್ನು ಕೇಳಿದಾಗಲೇ ಇದು ಸೀಸದ ವಿಷಕಾರಿ ಪರಿಣಾಮ ಇರಬಹುದು ಎಂದು ಅಂದಾಜಾಗಿತ್ತು. ಆತನನ್ನು ಪರೀಕ್ಷೆ ಮಾಡಿದಾಗ ಬೇರೆ ಯಾವ ಸಾಧ್ಯತೆಗಿಂತಲೂ ಸೀಸದ ಪರಿಣಾಮವೇ ಹೆಚ್ಚು ಅನಿಸಿತು. ಅದಕ್ಕಾಗಿಯೇ ಆತನ ಮನೆಗೆ ನಿಮ್ಮನ್ನು ಕಳಿಸಿದ್ದು. ಹುಡುಗನ ರಕ್ತದ ಪರೀಕ್ಷೆ ಸೀಸದ ಅಂಶವನ್ನು ಧೃಡಪಡಿಸಿತು. ಆದರೆ, ಆತನ ತಾಯಿಯ ಮತ್ತು ಅಜ್ಜಿಯ ರಕ್ತದಲ್ಲಿ ಸೀಸದ ಅಂಶ ಹೆಚ್ಚಾಗಿರಲಿಲ್ಲ. ಜೊತೆಗೆ, ಆತನ ಮನೆಯ ನಲ್ಲಿ ನೀರಿನಲ್ಲಿ ಸೀಸದ ಅಂಶವೇನೂ ಇರಲಿಲ್ಲ. ಸೀಸ ಇರಬಲ್ಲ ಬಣ್ಣವಾಗಲೀ, ಆಟಿಕೆಯಾಗಲೀ ಮಗುವಿನ ಬಳಿ ಇಲ್ಲ. ಅಂದರೆ, ಹುಡುಗ ಓಡಾಡುವ ಯಾವುದೋ ಜಾಗದಿಂದ ಸೀಸ ಆತನ ದೇಹವನ್ನು ಸೇರುತ್ತಿರಬೇಕು."

ಮೇಜಿನ ಮೇಲಿದ್ದ ಪುಸ್ತಕಗಳನ್ನು ಮುಚ್ಚಿ ಪ್ರೊಫೆಸರರು ಮುಂದುವರೆಸಿದರು: "ಈ ಸೀಸ ಎನ್ನುವುದು ಮನುಷ್ಯನ ದೇಹದಲ್ಲಿ ಸಹಜವಾಗಿ ಇರುವ ಲೋಹವಲ್ಲ. ನಮ್ಮ ದೇಹದಲ್ಲಿ ಸೀಸದ ಅಂಶವಿದೆ ಎಂದರೆ ಅದು ಹೊರಗಿನಿಂದಲೇ ಬಂದಿದೆ ಎಂದರ್ಥ. ಈಗ ಹುಡುಗನ ಮನೆಯವರಿಗೆ ಇಲ್ಲದ ಸೀಸದ ಅಂಶ ಹುಡುಗನ ರಕ್ತದಲ್ಲಿದೆ ಎಂದರೆ, ದಿನವಿಡೀ ಮನೆಯಿಂದ ಹೊರಗೆ ಇರುವ ಹುಡುಗ ಆ ಸಮಯದಲ್ಲಿ ಎಲ್ಲೋ ಸೀಸದ ವಾತಾವರಣದಲ್ಲಿ ಕಾಲ ಕಳೆಯುತ್ತಿದ್ದಾನೆ ಎಂದೇ ತಿಳಿಯುತ್ತದೆ. ತಾನು ಎಲ್ಲಿಗೆ ಹೋಗುತ್ತಿದ್ದೇನೆ ಎಂಬುದನ್ನು ವಿವರಿಸಲು ಬಾರದ ಹುಡುಗನನ್ನು ಸುಮ್ಮನೆ ಕೇಳಿ ಪ್ರಯೋಜನವಿಲ್ಲ. ಅದಕ್ಕೇ ಆತನನ್ನು ಕರೆದುಕೊಂಡು ಆತನ ಮನೆಯ ಬಳಿ ಹೋದದ್ದು. ತಾನು ದಿನವಿಡೀ ಆಟವಾಡುತ್ತಿದ್ದ ಷೆಡ್ಡನ್ನು ಆ ಹುಡುಗ ತೋರಿಸಿದ. ತಾವು ಮಾಡುವ ಅಪಮಾರ್ಗದ ಕೆಲಸ ಯಾರಿಗೂ ತಿಳಿಯಬಾರದೆಂದು ಹಗಲು ವೇಳೆ ಬೀಗ ಹಾಕುತ್ತಿದ್ದ ಷೆಡ್ಡಿನ ಕೆಲಸ ಆರಂಭವಾಗುತ್ತಿದ್ದೇ ಸಂಜೆಯ ನಂತರ. ಷೆಡ್ಡಿನ ಹಿಂಬದಿಯಲ್ಲಿ ಮಕ್ಕಳು ತೂರಿ ಬರಬಹುದಾದ ಕಿಂಡಿ ಇದೆಯೆಂದು ಪ್ರಾಯಶಃ ಆ ಷೆಡ್ಡಿನಲ್ಲಿ ಕೆಲಸ ಮಾಡುವವರಿಗೂ ತಿಳಿದಿಲ್ಲ. ಯಾರ ಸಮಸ್ಯೆಯೂ ಇಲ್ಲದೇ ಆಡುವಷ್ಟು ದೊಡ್ಡದಾದ ಜಾಗದಲ್ಲಿ ಆ ಮಗು ತನ್ನ ಮನಸ್ಸಿಗೆ ಬೇಕಾದಂತೆ ಇರುತ್ತಿತ್ತು. ಹಸಿವಾದಾಗ, ಕತ್ತಲೆಯಾದಾಗ ಅಲ್ಲಿಂದ ಹೋಗುತ್ತಿತ್ತು. ಸೀಸವನ್ನು ಕಾಯಿಸುತ್ತಿದ್ದ ಆ ಷೆಡ್ಡಿನ ವಾತಾವರಣದಲ್ಲಿ ದಿನದ ಬಹುಭಾಗ ಆಡುತ್ತಿದ್ದ ಮಗುವಿನ ದೇಹಕ್ಕೆ ಅನಾಯಾಸವಾಗಿ ವಿಫುಲ ಸೀಸದ ಅಂಶ ಸೇರಿ ಹೋಗಿತ್ತು. ಇವನ್ನೆಲ್ಲಾ ಒಂದಕ್ಕೊಂದು ತಾಳೆ ಮಾಡಿದ ನಂತರ ನಾನು ಪೋಲೀಸರಿಗೆ ಇದರ ಬಗ್ಗೆ ತನಿಖೆ ಮಾಡಲು ಸೂಚಿಸಿದೆ. ಹುಡುಗನ ಮೂಲದಿಂದ ದೊರೆತ ಬಹುಮಾನದ ಹಣವನ್ನು ಅವನಿಗೇ ನೀಡಿದೆ" ಎಂದು ಪ್ರೊಫೆಸರರು ಮಾತು ಮುಗಿಸಿದರು.

ವಿದ್ಯಾರ್ಥಿ ಕಣ್ಣರಳಿಸಿ ಕೇಳುತ್ತಿದ್ದ. ಆತನ ಮುಂದೆ ವೈದ್ಯಕೀಯ ಪತ್ತೆದಾರಿಕೆಯ ಹೊಸದೊಂದು ಅಧ್ಯಾಯವೇ ತೆರೆದು ಇಟ್ಟಂತಾಗಿತ್ತು. ಸಾರ್ವಜನಿಕ ಸಾರಿಗೆ ಸಾಕಷ್ಟಿಲ್ಲದ ನಮ್ಮ ದೇಶದಲ್ಲಿ ಕಾರು, ಬೈಕುಗಳ ಮೇಲೆ ನಮಗಿರುವ ಅವಲಂಬನೆ; ಯಾವುದೇ ಪೂರ್ವಸೂಚನೆಯಿಲ್ಲದೆ ವಿದ್ಯುತ್ ಕಡಿತ ಮಾಡುವ ನಿಗಮಗಳ ಬೇಜವಾಬ್ದಾರಿಗೆ ಪರಿಹಾರವಾಗಿ, ಮಾಡುವ ಕೆಲಸ ಕೆಡದಂತೆ ಯು.ಪಿ.ಎಸ್. ಹಾಕಿಸಿಕೊಳ್ಳಬೇಕಾದ ಅನಿವಾರ್ಯತೆ; ಇದಕ್ಕೆಲ್ಲ ಮೂಲವಾದ ಬ್ಯಾಟರಿಗಳ ಮೇಲಿನ ನಿರ್ಭರತೆ; ಜನರ ಈ ಅಸಹಾಯಕತೆಯನ್ನು ದುರುಪಯೋಗಪಡಿಸಿಕೊಂಡು ಬ್ಯಾಟರಿ ವ್ಯವಹಾರದಲ್ಲಿ ಅವ್ಯವಹಾರ ಮಾಡುವ ದುರುಳರ ಕಾರ್ಯಯೋಜನೆ ಮೊದಲಾದುವು ಆತನ ಚಿತ್ತದಲ್ಲಿ ಸುಳಿದವು. ಯಾರದ್ದೋ ಅವ್ಯವಹಾರದಲ್ಲಿ ಇನ್ಯಾರೋ ಬಲಿಯಾಗುವ ವಿಪರ್ಯಾಸ ಆತನ ಕಣ್ಣನ್ನು ಮಂಜಾಗಿಸಿತು. ಒಂದು ದಿನ ತಾನೂ ತನ್ನ ಪ್ರೊಫೆಸರರಂತೆ ತಾರ್ಕಿಕವಾಗಿ ಆಲೋಚಿಸಿ, ಮತ್ತೊಬ್ಬರ ಯೋಗಕ್ಷೇಮಕ್ಕೆ ಕಾರಣವಾಗಬೇಕೆಂಬ ಹೆಬ್ಬಾಸೆಯೊಂದಿಗೆ ವಿದ್ಯಾರ್ಥಿ ಪ್ರೊಫೆಸರರಿಗೆ ನಮಿಸಿ ಹೊರನಡೆದ.

*ಡಾ. ಕಿರಣ್ ಸೂರ್ಯ ವೃತ್ತಿಯಿಂದ ವೈದ್ಯರು. ವಿಜ್ಞಾನ ಲೇಖಕರು ಹಾಗೂ ಈಗ ವೈಜ್ಞಾನಿಕ ಕಥೆಗಾರರು*

# ಕೊಟ್ಟವನು ಕೋಡಂಗಿ..




## ವಿಕ್ರಮ ಮತ್ತು ಬೇತಾಳನ ಕಥೆಗಳು

ವಿಕ್ರಮನ ಮೌನ ಮುರಿಯುತ್ತಿದ್ದಂತೆ ಶವದೊಂದಿಗೆ ಮರದ ಕಡೆಗೆ ಹಾರಿದ ಭೇತಾಳ ಕೊಂಬೆಯಲ್ಲಿ ನೇತಾಡತೊಡಗಿತು. ಹೇಗಾದರೂ ಮಾಡಿ ಈ ಶವದ ಸಂಸ್ಕಾರವನ್ನು ಮಾಡಲೇಬೇಕು ಎಂದು ಹಠ ತೊಟ್ಟಿದ್ದ ವಿಕ್ರಮನೂ ಅಷ್ಟೇ ಛಲದಿಂದ ಮರಳಿ ಬಂದ. ಮರವನ್ನೇರಿ ಜೋತಾಡುತ್ತಿದ್ದ ಶವವನ್ನು ಹಗ್ಗದಿಂದ ಬಿಡಿಸಿ ಹೆಗಲ ಮೇಲೆ ಏರಿಸಿದ. ಮರವಿಳಿದು ಸ್ಮಶಾನದತ್ತ ನಡೆದ.

ಕಗ್ಗತ್ತಲಲ್ಲಿ ಕೇವಲ ಅವನೊಬ್ಬನೇ ಪಯಣಿಗೆ. ಜೊತೆಗೆ ಆ ಭೇತಾಳವಷ್ಟೆ. ರಾಜನ ಛಲವನ್ನೂ, ಮೌನವನ್ನೂ ಮುರಿಯಬೇಕೆಂದು ಭೇತಾಳ ತೀರ್ಮಾನಿಸಿದ ಹಾಗಿತ್ತು. "ಅಯ್ಯಾ ವಿಕ್ರಮ. ನಿನ್ನನ್ನು ನೋಡಿದರೆ ಪಾಪ ಎನ್ನಿಸುತ್ತದೆ. ಅಲ್ಲ. ಈ ಶವ ನಿನಗೇನಾಗಬೇಕು? ಸಂಸ್ಕಾರ ಮಾಡಿ ಅದಕ್ಕೆ ಉಪಕಾರ ಮಾಡಬೇಕು ಎಂದೇಕೆ ಹಠ ಹಿಡಿದಿದ್ದೀ? ಹಠ ಒಳ್ಳೆಯದಲ್ಲ. ಹಾಗೆಯೇ ಒಳ್ಳೆಯತನವೂ, ಉಪಕಾರಿಗುಣವೂ ಲಾಭ ತರುವುದಿಲ್ಲ." ಎಂದು ಮಾತನ್ನು ಆರಂಭಿಸಿತು. ವಿಕ್ರಮ ಮರುನುಡಿಯಲಿಲ್ಲವಾಗಿ ಭೇತಾಳ ತಾನೇ ಮಾತನ್ನು ಮುಂದುವರೆಸಿತು.

"ಉಪಕಾರ ನಷ್ಟ ತರುತ್ತದೆ ಎನ್ನುವುದಕ್ಕೆ ಒಂದು ಉದಾಹರಣೆ ಹೇಳುತ್ತೇನೆ ಕೇಳು. ಒಬ್ಬ ಬಾಲಕನಿದ್ದ. ಆತ ತನ್ನ ತಂದೆ, ತಾಯಂದಿರ ಮಾತನ್ನು ಚಾಚೂ ತಪ್ಪದೆ ಕೇಳುತ್ತಿದ್ದ. ಅಷ್ಟೇ ಅಲ್ಲ. ಅಯ್ಯೋ ಎಂದವರಿಗೆ ಸದಾ ಉಪಕಾರ ಮಾಡುವ ಗುಣ. ಕೊಡುಗೈ ದಾಸ. ಯಾರು ಏನೇ ಕೇಳಿದರೂ ಇಲ್ಲ ಎನ್ನುತ್ತಿರಲಿಲ್ಲ. ಹೀಗಿರುವಾಗ ಒಮ್ಮೆ ಆಷಾಢದಲ್ಲಿ ಗಾಳಿಪಟದ ಹಬ್ಬ ಬಂತು. ಬಾಲಕನಿಗೂ ಗಾಳಿಪಟ ಆಡಿಸುವ ಬಯಕೆ. ಆತ ಬಿದಿರು, ಕಾಗದ, ಅಂಟು ಎಲ್ಲವನ್ನೂ ತಂದು ಗಾಳಿಪಟ ಮಾಡಲು ಸಿದ್ಧ ಮಾಡಿಕೊಂಡ. ಆದರೆ ಅದನ್ನು ಮಾಡಲು ದಾರ ಬೇಕಿತ್ತು. ಅಮ್ಮನ ಬಳಿ ಹೋಗಿ ಬೇಡಿಕೊಂಡ. ಅಮ್ಮ ಅವನಿಗೆ ಒಂದಿಷ್ಟು ದಾರವನ್ನು ಕೊಟ್ಟು ಕಳಿಸಿದಳು. ಸಂಜೆಯಾದರೂ ಹುಡುಗ ಪಟವನ್ನು ಮಾಡಿದ ಸೂಚನೆ ಕಾಣದಿದ್ದಾಗ, ತಾಯಿ ಅವನನ್ನು ವಿಚಾರಿಸಿದಳು.

"ಯಾಕೋ ಮರಿ. ಗಾಳಿಪಟ ಏನಾಯಿತು? ಹಾರಿ ಹೋಯಿತಾ?"

"ಅಯ್ಯೋ ಇಲ್ಲಮ್ಮ. ಪಟ ಇನ್ನೂ ಮಾಡಿಯೇ ಇಲ್ಲ."

"ಯಾಕೆ? ಬೆಳಗ್ಗಿನಿಂದ ಏನು ಮಾಡುತ್ತಿದ್ದೆ?" ಎಂದು ಗದರಿಸಿದಳು ಮಾತೆ.

"ದಾರ ಮುಗಿದು ಹೋಯಿತಮ್ಮ. ಹಾರಿಸಲು ದಾರವೇ ಉಳಿಯಲಿಲ್ಲ." ಎಂದ ಹುಡುಗ.

ಅಮ್ಮನಿಗೆ ಅಚ್ಚರಿಯಾಯಿತು. ಒಂದು ದೊಡ್ಡ ಉಂಡೆ ಕೊಟ್ಟಿದ್ದನಲ್ಲೋ? ಅಷ್ಟನ್ನೂ ಏನು ಮಾಡಿದೆ?" ಎಂದು ವಿಚಾರಿಸಿದಳು.

"ಹೌದಮ್ಮ. ನೀನು ಒಂದು ದೊಡ್ಡ ಉಂಡೆ ಕೊಟ್ಟಿದ್ದೆ. ಅಣ್ಣ ಬಂದು ತನಗೂ ಬೇಕು ಎಂದ. ಅವನಿಗೆ ಅರ್ಧ ಕೊಟ್ಟೆ."

"ಇನ್ನೂ ಅರ್ಧ ಇದ್ದಿರಬೇಕಲ್ಲ."

"ಹೌದಮ್ಮ. ಇನ್ನೂ ಅರ್ಧ ಇತ್ತು. ಆದರೆ ಬಟ್ಟೆ ಒಣಗಿಸುವ ದಾರ ಕಿತ್ತು ಹೋಗಿದೆ ಕಟ್ಟು ಅಂದೆಯಲ್ಲ? ಅದಕ್ಕೇ ಅದರಲ್ಲಿ ಅರ್ಧವನ್ನು ಉಪಯೋಗಿಸಿ ಬಟ್ಟೆ ಒಣಗಿಸಲು ಕಟ್ಟಿಬಿಟ್ಟೆ." ಎಂದು ಬಾಲಕ ವಿವರಿಸಿದ.

"ಉಳಿದದ್ದು?"

"ಉಳಿದದ್ದರಲ್ಲಿ ಐದರಲ್ಲಿ ಎರಡು ಪಾಲು ಈ ಪಟ ಕಟ್ಟುವುದಕ್ಕೆ ಉಪಯೋಗಿಸಿ ಬಿಟ್ಟೆ. ಐದರಲ್ಲಿ ಒಂದು ಪಾಲು ಬಾಲಂಗೋಚಿ ಕಟ್ಟಲು ಬೇಕಾಯಿತು. ಈಗ ಇಷ್ಟೇ ಉಳಿಯಿತು. ಇದು ಕಟ್ಟಿದರೆ ಪಟ ನನ್ನ ಎತ್ತರಕ್ಕಷ್ಟೆ ಹಾರುತ್ತೆ." ಎಂದ ಹುಡುಗ.

ಅಮ್ಮ ಅವನ ಕೈಯಲ್ಲಿದ್ದ ದಾರ ನೋಡಿದಳು.

"ಏನೋ ಇದು ಬರಿ ನಾಲ್ಕು ಅಡಿ ಮಾತ್ರ ಉಳಿದಿದೆಯಲ್ಲೋ? ನಾನು ಎಷ್ಟೊಂದು ಕೊಟ್ಟಿದ್ದೆ! " ಎಂದು ಉದ್ಗರಿಸಿದಳು.

ಪಾಪ. ಆ ಹುಡುಗ ನಿನ್ನ ಹಾಗೆ ತನ್ನ ಒಳ್ಳೆಯತನದಿಂದ ಎಲ್ಲ ದಾರವನ್ನೂ ಕಳೆದುಕೊಂಡು ಬಿಟ್ಟಿದ್ದ. ಅದಿರಲಿ. ಆ ಅಮ್ಮನಿಗಾದರೂ ತಾನು ಎಷ್ಟುದ್ದ ದಾರ ಕೊಟ್ಟಿದ್ದೆ? ಆ ಉಂಡೆಯಲ್ಲಿ ಎಷ್ಟು ದಾರವಿತ್ತು ಅನ್ನುವುದು ಗೊತ್ತಿತ್ತೋ? ನನಗೆ ಅನುಮಾನ. ನೀನು ಲೆಕ್ಕದಲ್ಲಿ ಬಹಳ ಜಾಣನಂತೆ. ನೀನೇನಾದರೂ ಲೆಕ್ಕ ಹಾಕಿ ಹೇಳಬಹುದಾ? ಒಂದು ವೇಳೆ ಉತ್ತರ ನಿನಗೆ ಗೊತ್ತಿದ್ದೂ ಹೇಳದೇ ಹೋದರೆ ನಿನ್ನ ತಲೆ?.

ತಲೆ ಒಡೆದು ಸಾವಿರ ಚೂರಾಗಿ ಬಿಡುತ್ತದೆ ಎಂದು ಭೇತಾಳ ಇನ್ನೂ ಶಾಪ ಕೊಡುವುದರಲ್ಲಿ ಇತ್ತಷ್ಟೆ. ಅಷ್ಟರಲ್ಲಿ ವಿಕ್ರಮ ತಟಕ್ಕನೆ ಆ ಉಂಡೆಯಲ್ಲಿ ಇದ್ದ ದಾರದ ಉದ್ದ ಹೇಳೀಬಿಟ್ಟಿದ್ದ.

ವಿಕ್ರಮನ ಮೌನವನ್ನು ಹೀಗೆ ಮುರಿದ ಖುಷಿಯಲ್ಲಿ ಭೇತಾಳ ಮತ್ತೆ ಅವನ ಹೆಗಲಿನಿಂದ ಶವದ ಜೊತೆಗೆ ಹಾರಿ ಹೋಯಿತು.

ಅಂದ ಹಾಗೆ ಅಮ್ಮ ಕೊಟ್ಟ ದಾರದ ಉಂಡೆಯಲ್ಲಿ ಎಷ್ಟು ಉದ್ದ ದಾರವಿದ್ದಿರಬಹುದು? ನೀವೇನಾದರೂ ಊಹಿಸಬಹುದಾ? ನಿಮ್ಮ ಉತ್ತರಗಳನ್ನು ಬರೆದು kutuhalikannada@gmail.com ಗೆ ಕಳಿಸಿ. ಭೇತಾಳನಿಗೆ ತಿಳಿಸೋಣ.

## ಕಳೆದ ಸಂಚಿಕೆಯ ಬೇತಾಳನ ಪ್ರಶ್ನೆಗೆ ಉತ್ತರ:

### ಸುಳ್ಳು ಹೇಳಿದವರು ಯಾರು?

ರಾಜ ಇಬ್ಬರಿಗೂ ಒಂದೇ ತೆರನ ಪ್ರಶ್ನೆ ಕೇಳಿದನಷ್ಟೆ. ಉತ್ತರ ಸರಿ ಇದ್ದರೆ ಅವರು ಗಂಟೆ ಆಡಿಸಬೇಕಿತ್ತು. ಮೊದಲನೆಯವನನ್ನು ನೀನು ಸತ್ಯವಂತರ ದೇಶದವನಾ ಎಂದಾಗ ಆತ ಹೌದು ಎನ್ನುವಂತೆ ಗಂಟೆ ಆಡಿಸಿದ್ದ. ಆಗ ಎರಡನೆಯವನನ್ನು ನೋಡಿ, ಮೊದಲನೆಯವನು ಹೌದು ಎಂದನೇ ಎಂದು ಕೇಳಿದ್ದ. ಎರಡನೆಯವ ಹೌದು ಎಂದು ಗಂಟೆ ಬಾರಿಸಿದ್ದ. ಎರಡನೆಯವ ಹೇಳಿದ್ದು ನಿಜವಾದ ಉತ್ತರವಾಗಿತ್ತಾದ್ದರಿಂದ, ಮೊದಲನೆಯವ ಹೇಳಿದ್ದು ಸುಳ್ಳು. ಅಂದರೆ ಆತ ಸುಳ್ಳರ ದೇಶದವ.

ಮೊದಲನೆಯವ ಸತ್ಯವಂತರ ದೇಶದವನಾಗಿದ್ದಿದ್ದರೆ ಆತ ಹೇಳಿದ್ದು ನಿಜ ಆಗುತ್ತಿತ್ತು. ಆಗ ಎರಡನೆಯವ ಹೇಳಿದ್ದು ಸುಳ್ಳು ಎನಿಸುತ್ತಿತ್ತು. ಆದರೆ ಎರಡನೆಯವನ ಉತ್ತರ ಸತ್ಯವೇ ಆಗಿದ್ದರಿಂದ ಮೊದಲನೆಯವನೇ ಸುಳ್ಳ. ಹೇಗೆ ನೋಡಿದರೂ ಮೊದಲನೆಯವನೇ ಸುಳ್ಳ ಎಂಬುದು ಸಾಬೀತಾಗುತ್ತದೆ. ರಾಜ ಬಹಳ ಜಾಣತನದಿಂದ ಪ್ರಶ್ನೆಯನ್ನು ಕೇಳಿದ್ದ ಎಂದು ವಿಕ್ರಮ ಉತ್ತರಿಸಿದ.

# ಪಿಂಕಿಸಫಾ ಕಥೆ ಬರೆದಿರುವವರಿಗೆ ಧನ್ಯವಾದಗಳು

**ಓದುಗರ ಅಭಿಪ್ರಾಯ**

ಪಿಂಕಿಸಫಾ ಕಥೆ ಓದಿದ ನನಗೆ ತುಂಬ ಖುಷಿ ಮತ್ತು ಸ್ವಲ್ಪ ಬೇಸರವೂ ಆಯಿತು. ಇದರಿಂದ ನನಗೆ ತಿಳಿದಿದ್ದು ಏನೆಂದರೆ ಪ್ರಾಣಿಗಳಿಗೂ ಮನುಷ್ಯನ ಹಾಗೆ ಕುಟುಂಬದ ಅವಶ್ಯಕತೆ ಮತ್ತು ಕೌಟುಂಬಿಕ ಪ್ರೀತಿ ಬಹಳ ಮುಖ್ಯ ಎಂಬುದು. ಆನೆಗಳ ಜೀವನ ಶೈಲಿಯಲ್ಲೂ ಹೆಣ್ಣು ಆನೆಗಳಿಗೆ ಸ್ವತಂತ್ರ ಕಡಿಮೆ. ಪ್ರಾಣಿಗಳಲ್ಲಿ ಕೆಲವು ಪ್ರಾಣಿಗಳು ಮನುಷ್ಯನಂತೆ ಸಂಘಜೀವಿ. ಆನೆಗಳಲ್ಲಿಯೂ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಿದೆ. ವಯಸ್ಸಿಗೆ ಬಂದ ಗಂಡಾನೆಗಳು ತಾವು ಹುಟ್ಟಿದ ಕುಟುಂಬವನ್ನು ತೊರೆದು ಸ್ವತಂತ್ರವಾಗಿ, ಅಂದರೆ ತಾಯಿಯ ಆಸರೆಯಿಲ್ಲದೆ ಬದುಕುವುದನ್ನು ಕಲಿಯಲು ಪ್ರಾರಂಭಿಸುತ್ತವೆ. ಆನೆಗಳಿಗೆ ಬಹಳ ಹೆಚ್ಚಿನ ಪ್ರಮಾಣದ ಆಹಾರದ ಅವಶ್ಯಕತೆ ಇರುತ್ತದೆ. ಆದರೆ ಕೆಲವೊಮ್ಮೆ ಬರಗಾಲದಂತಹ ನೈಸರ್ಗಿಕ ವಿಪತ್ತಿನ ಸಂದರ್ಭದಲ್ಲಿ ಆಹಾರದ ಕೊರತೆಯುಂಟಾದಾಗ ಆನೆಗಳು ಬಹಳ ಕಷ್ಟಪಡುತ್ತವೆ. ಆನೆಯ ಲದ್ದಿಯ ಅತ್ಯಂತ ಹೊರಭಾಗವನ್ನುತೆಗೆದುಕೊಂಡು ಪ್ರಯೋಗಶಾಲೆಗಳಲ್ಲಿ ಡಿಎನ್ಎ ಅನ್ನು ವಿಶ್ಲೇಷಿಸಿ ಪ್ರತೀ ಆನೆಯ ತಳಿಸ್ವರೂಪವನ್ನು ತಿಳಿಯಲು ಬಳಸಿಕೊಳ್ಳಲಾಗುತ್ತದೆ. ಪ್ರಸ್ತುತ ಕರ್ನಾಟಕದಲ್ಲಿ 6049 ಆನೆಗಳಿವೆ. ಅಸ್ಸಾಂನಲ್ಲಿ 5719 ಆನೆಗಳು, ಕೇರಳದಲ್ಲಿ 3054 ಆನೆಗಳಿದ್ದು, ಒಟ್ಟಾರೆ, ದಕ್ಷಿಣ ಭಾರತದಲ್ಲಿ 11960 ಆನೆಗಳಿದ್ದು ದೇಶದಲ್ಲೇ ಮೊದಲ ಸ್ಥಾನದಲ್ಲಿದೆ.

ಪಿಂಕಿಸಫಾ ಕಥೆ ಬರೆದಿರುವವರಿಗೆ ಧನ್ಯವಾದಗಳು. ಇದರಿಂದ ನಮಗೆ ಅನೇಕ ವಿಷಯಗಳು ತಿಳಿದವು. ತುಂಬಾ ಚೆನ್ನಾಗಿ ಬರೆದಿದ್ದಾರೆ. ಆನೆಗಳ ಜೀವನ ಶೈಲಿ, ಅಹಾರ ಪದ್ದತಿ ಮತ್ತು ಇನ್ನಿತರ ವಿಷಯಗಳನ್ನು ತಿಳಿಯುವುದಕ್ಕೆ ಅನುಕೂಲವಾಯಿತು.

**ಮಂಜುಳ D/o ಸಿದ್ದರಾಜಚಾರಿ**
**10ನೇ ತರಗತಿ**
**ಸರ್ಕಾರಿ ಪ್ರೌಢಶಾಲೆ, ಮುಳ್ಳೂರು**






# ಕುತೂಹಲಿಗೆ ನೀವೂ ಬರೆಯಿರಿ!

**ಕುತೂಹಲಿ ಸುದ್ದಿ ಪತ್ರದಲ್ಲಿ ಜನಪ್ರಿಯ ವಿಜ್ಞಾನ ಲೇಖನಗಳನ್ನು ಪ್ರಕಟಿಸಲು ಬಯಸುವವರು, ಸಂಪಾದಕರು, ಕುತೂಹಲಿ kutuhalikannada@gmail.com ಇಲ್ಲಿಗೆ ಇ-ಮೇಲ್ ಕಳಿಸಬಹುದು. ಹಸ್ತಪ್ರತಿ ನುಡಿ ಅಥವಾ ಬರಹದಲ್ಲಿ ಇರಬೇಕು. ಲೇಖನಕ್ಕೆ ಒಪ್ಪುವ ಚಿತ್ರಗಳನ್ನೂ ಲಗತ್ತಿಸಬಹುದು. ಪ್ರಕಟಿತ ಲೇಖನಗಳಿಗೆ ಸೂಕ್ತ ಗೌರವಧನವನ್ನು ನೀಡಲಾಗುವುದು.**



ರಚನೆ ಮತ್ತು ವಿನ್ಯಾಸ: ಆನಂದಮೈಡ್ ಮೀಡಿಯಾ ಪ್ರೈವೇಟ್ ಲಿಮಿಟೆಡ್, ಬೆಂಗಳೂರು